Price Rs. 3.00/- per copy only





# ಕರ್ನಾಟಕ ಸ್ಕೌಟ್ ಮತ್ತು ಗೈಡ್

ವಾರ್ತಾ ಪತ್ರಿಕೆ

# Karnataka Scout & Guide

News Magazine



Vol - 7 OCTOBER - 2008 No. : 09

## ದೀಪಾವಳಿ ಮತ್ತು ಕನ್ನಡ ರಾಜ್ಯೋತ್ಸವದ ಶುಭಾಶಯಗಳು




ದಿನಾಂಕ ಅಕ್ಟೋಬರ್ 2, 2008ರಂದು ಗಾಂಧಿ ಜಯಂತಿ ಅಂಗವಾಗಿ ವಿಧಾನಸೌಧದ ಮುಂಭಾಗದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಕುಷ್ಠರೋಗದ ಬಗ್ಗೆ ಭಿತ್ತಿ ಪತ್ರಗಳನ್ನು ಹಿಡಿದು ಪಥಚಲನವನ್ನ ಕರ್ನಾಟಕ ಸರ್ಕಾರದ ಕಾರ್ಮಿಕ ಸಚಿವರಾದ ಮಾನ್ಯ ಶ್ರೀ ಬಿ.ಎನ್. ಬಚ್ಚೇಗೌಡರವರು ಹಸಿರು ಬಾವುಟ ಹಾರಿಸುವುದರೊಂದಿಗೆ ಉದ್ಘಾಟಿಸಿದರು.




ದಿನಾಂಕ ಅಕ್ಟೋಬರ್ 2, 2008ರಂದು ಗಾಂಧಿ ಜಯಂತಿ ಅಂಗವಾಗಿ ಬಿಷಪ್ ಕಾಟನ್ ಗರ್ಲ್ಸ್ ಶಾಲೆಯಲ್ಲಿ ಜರುಗಿದ "ಬಾಪೂಜಿ ಪುನರ್ ಮನನ"ದ ಮುಕ್ತಾಯ ಸಮಾರಂಭದ ಮುಖ್ಯ ಅತಿಥಿಯಾಗಿ ರಾಜ್ಯ ಸಂಸ್ಥೆಯ ಹಿರಿಯ ಉಪಾಧ್ಯಕ್ಷರು ಹಾಗೂ ಮಾಜಿ ಹಣಕಾಸು, ಕೈಗಾರಿಕೆ ಸಚಿವರಾದ ಶ್ರೀ ಪಿ.ಜಿ.ಆರ್. ಸಿಂಧಿಯಾ ಪ್ರಶಸ್ತಿ ಫಲಕವನ್ನು ಅತ್ಯುತ್ತಮ ಪ್ರದರ್ಶನ ನೀಡಿದ ದಾವಣಗೆರೆ ಅನುಭವ ಮಂಟಪ ಶಾಲೆಯ ಗೈಡ್ ಕುಮಾರಿ ಚಂದನಗೆ ನೀಡಿದರು.



ದಿನಾಂಕ 28-9-2008ರಂದು ಬಳ್ಳಾರಿ ಜಿಲ್ಲಾ ಸಂಸ್ಥೆಯ ವತಿಯಿಂದ ಏರ್ಪಡಿಸಿದ ಜಿಲ್ಲೆಯ ಮಾನ್ಯ ಸಚಿವರುಗಳಿಗೆ ಹಾಗೂ ಬಳ್ಳಾರಿ ನಗರ ಶಾಸಕರಿಗೆ ಸನ್ಮಾನ ಏರ್ಪಡಿಸಿದ ಸಂಧರ್ಬದಲ್ಲಿ, ಅರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಮಾನ್ಯ ಸಚಿವರಾದ ಶ್ರೀ ಬಿ. ಶ್ರೀರಾಮುಲು ಅವರು ಗೈಡ್ ಕ್ಯಾಪ್ಟನ್‌ಗೆ ಪ್ರಮಾಣ ಪತ್ರ ನೀಡಿದರು. ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಆರ್. ವೆಂಕಣ್ಣ ಮನವಿ ಪತ್ರವನ್ನು ಮಾನ್ಯ ಸಚಿವರಿಗೆ ಹಾಗೂ ಬಳ್ಳಾರಿ ಶಾಸಕರಾದ ಶ್ರೀ ಜಿ. ಸೋಮಶೇಖರ ರೆಡ್ಡಿ ಅವರಿಗೆ ನೀಡುತ್ತಿರುವುದು.



ದಿನಾಂಕ 22 ಅಕ್ಟೋಬರ್ 2008 ರಂದು ದೊಡ್ಡಬಳ್ಳಾಪುರದ ಡಾ. ಅನಿಬೆಸೆಂಟ್ ತರಬೇತಿ ಕೇಂದ್ರದಲ್ಲಿ ಜರುಗಿದ ವೃಕ್ಷಮಣಿ ತರಬೇತಿ, ಮುಂದುವರೆದ ತರಬೇತಿ, ರೋವರ್ ನಾಯಕರ ತರಬೇತಿ, ಮುಂದುವರೆದ ಕಬ್ ತರಬೇತಿಗಳ ಮುಕ್ತಾಯ ಸುಮಾರಂಭದಲ್ಲಿ ಮುಖ್ಯ ಅತಿಥಿಯಾಗಿ ಆಗಮಿಸಿದ್ದ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ಕಾರ್ಯದರ್ಶಿಗಳಾದ ಶ್ರೀ ಐ.ಎಂ. ವಿಠಲಮೂರ್ತಿ ಮತ್ತು ರಾಜ್ಯ ಮುಖ್ಯ ಆಯುಕ್ತ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ಹಾಗೂ ಸಂಸ್ಥೆಯ ಪದಾಧಿಕಾರಿಗಳನ್ನು ಮತ್ತು ಶಿಭಿರದ ನಾಯಕರುಗಳನ್ನು ಕಾಣಬಹುದು.



ಚಿತ್ರದುರ್ಗ ಜಿಲ್ಲಾ ಮಟ್ಟದ ಸ್ಕೌಟರ್ಸ್ ಮತ್ತು ಗೈಡರ್ಸ್ ಸಮ್ಮೇಳನವನ್ನು ಚಿತ್ರದುರ್ಗ ಶಾಸಕರಾದ ಶ್ರೀ ಎಸ್. ಕೆ. ಬಸವರಾಜನ್ ಉದ್ಘಾಟಿಸಿದರು. ಶ್ರೀ ಎಲ್. ರಂಗಪ್ಪ ಜಿಲ್ಲಾ ಮುಖ್ಯ ಆಯುಕ್ತ ಹಾಗೂ ಉಪನಿರ್ದೇಶಕರು, ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಎಂ.ರೇವಣ್ಣ ಹಾಗೂ ಜಿಲ್ಲಾ ಪಧಾದಿಕಾರಿಗಳು ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು.



ಗದಗ ತಾಲ್ಲೂಕು ಸಂಸ್ಥೆಯ ಮೇಲಂತಸ್ತು ಕಟ್ಟಡದ ಪರೀಶಿಲನೆಯಲ್ಲಿ ವಿಧಾನ ಪರಿಷತ್ ಸದಸ್ಯ ಹಾಗೂ ಮಾಜಿ ಶಿಕ್ಷಣ ಸಚಿವ ಶ್ರೀ ಬಸವರಾಜು ಹೊರಟ್ಟಿಯವರೊಂದಿಗೆ ಶ್ರೀ ಎ.ಎಂ. ವಡಗೇರಿ, ಕ್ಷೇತ್ರ ಶಿಕ್ಷಣಾಧಿಕಾರಿ ಹಾಗೂ ತಾಲ್ಲೂಕು ಸಂಸ್ಥೆಯ ಪಧಾದಿಕಾರಿಗಳನ್ನು ಕಾಣಬಹುದು.



15-8-2008ರಂದು ಸ್ವಾತ್ರೋಂತ್ಸವ ದಿನಾಚರಣೆಯದಂದು ಸ್ಕೌಟ್-ಗೈಡ್ ಪಥಚಲನದ ಕಾರ್ಯಕ್ರಮದಲ್ಲಿ ಗೈಡ್ಸ ಪಥಸಂಚಲನದಲ್ಲಿ ಜಿಲ್ಲೆಗೆ ಪ್ರಥಮ ಸ್ಥಾನ ಪಡೆದುರಿಂದ ಜಿಲ್ಲೆಯ ಉಸ್ತುವಾರಿ ಸಚಿವರಾದ ಶ್ರೀರಾಮುಲರವರಿಂದ ಪ್ರಶಸ್ತಿ ಪತ್ರ ಮತ್ತು 10 ರಾಷ್ಟ್ರಪಶಸ್ತಿ ಪಡೆದ ಸ್ಕೌಟ್ಸ್/ಗೈಡ್ಸ್‌ಗಳಗೆ ಪ್ರಮಾಣಪತ್ರ ಪಡೆದ ಕುಮಾರಿ ಆಸಂಗಿ ಗೈಡ್ ವಿದ್ಯಾರ್ಥಿನಿ ಕಲ್ಕೊತ್ತಾ ಹಾಗೂ ದೆಹಲಿ ಶತಮಾನೋತ್ಸವ ಜಾಂಬೋರಿಯಲ್ಲಿ ಭಾಗವಹಿಸಿದ್ದಕ್ಕೆ ಉಸ್ತುವಾರಿ ಸಚಿವರ ಸಮಕ್ಷಮ ಪ್ರಶಸ್ತಿ ಪಡೆದರು.



ದಿನಾಂಕ 26-09-2008ರಂದು ನರಗುಂದ ತಾಲ್ಲೂಕಿನ ಸ್ಕೌಟರ್ಸ್/ಗೈಡರ್ಸ್ ಸಮಾವೇಶದಲ್ಲಿ ಕರ್ನಾಟಕ ರಾಜ್ಯದ ಮುಖ್ಯಮಂತ್ರಿಗಳ ಸಂಪುಟ ದರ್ಜೆಯ ಸಂಸದೀಯ ಕಾರ್ಯದರ್ಶಿಗಳು ಹಾಗೂ ನರಗುಂದ ತಾಲೂಕಿನ ಶಾಸಕರಾದ ಮಾನ್ಯ ಶ್ರೀ ಸಿ.ಸಿ. ಪಾಟೀಲರವರು, ನರಗುಂದ ಪುರಸಭೆಯಿಂದ ಕೊಡಮಾಡಿದ 100ಜೊತೆ ಸ್ಕೌಟ್-ಗೈಡ್ ಸಮವಸ್ತ್ರಗಳನ್ನು ಸ್ಕೌಟ್ಸ್/ಗೈಡ್ಸ್‌ಗಳಿಗೆ ವಿತರಿಸಿದರು.


Price Rs. 3.00/- per copy only


ಕರ್ನಾಟಕ
# ಸ್ಕೌಟ್ ಮತ್ತು ಗೈಡ್
ವಾರ್ತಾ ಪತ್ರಿಕೆ
# Karnataka Scout & Guide
News Magazine

Vol - 7 | OCTOBER - 2008 | No. 09




## ಪರಿವಿಡಿ

# ಮುಖ್ಯ ಆಯುಕ್ತರ ನುಡಿ.........................

ಮಾನ್ಯರೇ,

ಅಕ್ಟೋಬರ್ 2, ಭಾರತಕ್ಕೆ ಸ್ವಾತಂತ್ರ್ಯ ತಂದುಕೊಟ್ಟ ರಾಷ್ಟ್ರಪಿತ ಮಹಾತ್ಮಾಗಾಂಧಿ ಹಾಗೂ ಭಾರತದ ಹೆಮ್ಮೆಯ ಪ್ರಧಾನ ಮಂತ್ರಿಯಾಗಿದ್ದ ಲಾಲ್ ಬಹದ್ದೂರ್ ಶಾಸ್ತ್ರಿ ಅವರುಗಳ ಜಯಂತಿ ಆಚರಣೆ ದಿನ. ಅಂದು ವಿದಾನಸೌಧದ ಮುಂಭಾಗದಿಂದ ಕುಷ್ಠರೋಗ ನಿವಾರಣಾ ಸಂಸ್ಥೆ, ನವದೆಹಲಿ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ರಾಷ್ಟ್ರೀಯ ಸಂಸ್ಥೆ ಮತ್ತು ಕರ್ನಾಟಕಗಳ ಸಹಯೋಗದೊಂದಿಗೆ 500 ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಕುಷ್ಠರೋಗದ ಬಗ್ಗೆ ಸಮಾಜದಲ್ಲಿ ಅರಿವುಂಟು ಮಾಡುವ ಭಿತ್ತಿ ಪತ್ರಗಳನ್ನು ಹೊಂದಿದ ಪಥಚಲನವನ್ನು ಕರ್ನಾಟಕ ಸರ್ಕಾರದ ಕಾರ್ಮಿಕ ಸಚಿವರಾದ ಮಾನ್ಯಶ್ರೀ ಬಿ.ಎನ್. ಬಚ್ಚೇಗೌಡ ಅವರು ಹಸಿರು ಬಾವುಟ ಹಾರಿಸುವುದರೊಂದಿಗೆ ಉದ್ಘಾಟಿಸಿ, ಕುಷ್ಠರೋಗ ಅಂಟುರೋಗವಲ್ಲ – ಕುಷ್ಠರೋಗವನ್ನು ನಿವಾರಿಸಬಹುದು ಎಂಬ ಬಗ್ಗೆ ಸಾಮಾಜಿಕ ಪ್ರಜ್ಞೆ ಉಂಟುಮಾಡುವಲ್ಲಿ ಸ್ಕೌಟ್ಸ್-ಗೈಡ್ಸ್ ಗಳು ಹಾಗೂ ಸಾರ್ವಜನಿಕರ ಪಾತ್ರ ಮಹತ್ವವಾದದ್ದು ಎಂದರು.

ಈ ಸಂದರ್ಭದಲ್ಲಿ ಭಾರತದ ಹಲವಾರು ರಾಜ್ಯಗಳಿಂದ ಮಹಾತ್ಮಾಗಾಂಧಿ ವೇಶಭೂಷಣದೊಂದಿಗೆ ರಾಷ್ಟ್ರೀಯ ಸ್ಪರ್ಧೆ "ಬಾಪೂಜಿ ಪುನರ್‌ಮನನ" ಕಾರ್ಯಕ್ರಮದಲ್ಲಿ ಭಾಗವಹಿಸಿದ್ದ 30 ಬಾಪೂಜಿ ವೇಶದಾರಿಗಳೂ ಪಥಚಲನದಲ್ಲಿ ಭಾಗವಹಿಸಿದ್ದರು. ವಿಧಾನಸೌಧದಿಂದ ಬಿಷಪ್ ಕಾಟನ್ ಗರ್ಲ್ಸ್ ಶಾಲೆಯ ವರೆಗೆ ಜರುಗಿದ ಪಥಚಲನದಲ್ಲಿ ನನ್ನೊಂದಿಗೆ ಯುವಜನ ಸೇವ ಮತ್ತು ಕ್ರೀಡಾ ಇಲಾಖೆಯ ಜಂಟಿ ನಿರ್ದೇಶಕರುಗಳಾದ ಶ್ರೀ ಆರ್. ಎಲ್. ಪಾಟೀಲ್ ಮತ್ತು ಶ್ರೀಮತಿ ಎಸ್. ಲಲಿತಮ್ಮ, ರಾಜ್ಯ ಕೋಶಾಧಿಕಾರಿಗಳಾದ ಶ್ರೀ ಟಿ. ಪ್ರಭಾಕರ್, ರಾಜ್ಯ ಗೈಡ್ ಆಯುಕ್ತೆ ಶ್ರೀಮತಿ ರವಿವೆಸ್ಲಿ, ಜಂಟಿ ರಾಜ್ಯ ಕಾರ್ಯದರ್ಶಿ ಶ್ರೀಮತಿ ಬಿ.ವಿ. ರಾಮಲತ, ಸ್ಥಾನಿಕ ಆಯುಕ್ತ ಶ್ರೀ ಕೆ. ತಿಮ್ಮಪ್ಪ ಹಾಗೂ ರಾಜ್ಯ ಸಂಸ್ಥೆ ಹಾಗೂ ಜಿಲ್ಲಾ ಸಂಸ್ಥೆಗಳ ಪದಾಧಿಕಾರಿಗಳು ಭಾಗವಹಿಸಿ ಪಥಚಲನಕ್ಕೆ ಹೆಚ್ಚಿನ ಮೆರಗು ನೀಡಿದರು. ರಾಷ್ಟ್ರಪಿತ ಬಾಪೂಜಿಗೆ ಕುಷ್ಠರೋಗಳ ಬಗ್ಗೆ ಇದ್ದ ಅನುಕಂಪ ಹಾಗೂ ಸಹಾನುಭೂತಿ ಬಗ್ಗೆ ಉತ್ತಮ ಪ್ರದರ್ಶನ ನೀಡಲಾಯಿತು. ನಂತರ ಬಿಷಪ್ ಕಾಟನ್ ಶಾಲೆಯ ಸಭಾಂಗಣದಲ್ಲಿ ಜರುಗಿದ ಸಾಂಸ್ಕೃತಿಕ ಕಾರ್ಯಕ್ರಮ "ಬಾಪೂಜಿ ಪುನರ್‌ಮನನ"ದ ಮುಕ್ತಾಯ ಸಮಾರಂಭದ ಮುಖ್ಯ ಅತಿಥಿಗಳಾಗಿ ರಾಜ್ಯ ಸಂಸ್ಥೆಯ ಹಿರಿಯ ಉಪಾಧ್ಯಕ್ಷರು ಹಾಗೂ ಮಾಜಿ ಹಣಕಾಸು, ಕೈಗಾರಿಕೆ ಸಚಿವರಾದ ಶ್ರೀ ಪಿ.ಜಿ.ಆರ್. ಸಿಂಧಿಯಾ ಹಾಗೂ ಬೆಂಗಳೂರು ಉತ್ತರ ಲೋಕಸಭಾಸದಸ್ಯರಾದ ಡಾ.ಹೆಚ್.ಟಿ. ಸಾಂಗ್ಲಿಯಾನ ಭಾಗವಹಿಸಿ ಪ್ರಶಸ್ತಿ ಫಲಕಗಳನ್ನು ಭಾಗವಹಿಸಿದ ಅತ್ಯುತ್ತಮ ಪ್ರದರ್ಶನ ನೀಡಿದವರೆಲ್ಲರಿಗೂ ನೀಡಿದರು. ಸಮಾರಂಭದಲ್ಲಿ ಲೆಪ್ರಸಿ ನಿವಾರಣಾ ಸಂಸ್ಥೆ ಅಧ್ಯಕ್ಷರಾದ ಡಾ. ಡಿ.ಪಿ.ಎನ್. ಪ್ರಸಾದ್. ನಿರ್ದೇಶಕರಾದ ಡಾ. ಜಯಕುಮಾರ್ ಡೇನಿಯಲ್ ಹಾಗೂ ಮಾಧ್ಯಮಗಳ ಮುಖ್ಯಸ್ಥ ಶ್ರೀ ಮನೋಜ್ ವರ್ಗೀಸ್, ರಾಜ್ಯ ಸ್ಕೌಟ್ ಆಯುಕ್ತ ಶ್ರೀ ಟಿ.ಎಸ್. ಲೂಕಾಸ್ ಹಾಗೂ ಸ್ಕೌಟ್ಸ್-ಗೈಡ್ಸ್‌ಗಳು ಹಲವಾರು ಗಣ್ಯವ್ಯಕ್ತಿಗಳು ಭಾಗವಹಿಸಿದ್ದರು.

ದಿನಾಂಕ ಅಕ್ಟೋಬರ್ 5, 2008 ರಂದು ಕನಕಪುರ ತಾಲ್ಲೂಕು ಹಾರೋಹಳ್ಳಿ ಪ್ರಗತಿ ವಿದ್ಯಾನಿಕೇತನ ಏರ್ಪಡಿಸಿದ "ಪ್ರತಿಭಾಪುರಸ್ಕಾರ 2008" ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಹೆಚ್ಚಿನ ಅಂಕ ಪಡೆದು ಉತ್ತೀರ್ಣರಾದ ಶಾಲೆಯ ವಿದ್ಯಾರ್ಥಿಗಳಿಗೆ ಪ್ರಶಸ್ತಿ-ಗೌರವಿಸುವ ಸಮಾರಂಭದಲ್ಲಿ ಭಾಗವಹಿಸಿ ಸಂಸ್ಥೆಗೆ- ವಿದ್ಯಾರ್ಥಿಗಳಿಗೆ ಶುಭ ಹಾರೈಸಿದೆ. ಸಮಾರಂಭದಲ್ಲಿ ಮಾಜಿ ಸಚಿವರೂ ಹಾಗೂ ಸಂಸ್ಥೆಯ ಉಪಾಧ್ಯಕ್ಷರಾದ ಶ್ರಿ ಪಿ.ಜಿ.ಆರ್. ಸಿಂಧಿಯಾ ಅವರು ಭಾಗವಹಿಸಿ ಎಲ್ಲಾ ಅರ್ಹ ವಿದ್ಯಾರ್ಥಿಗಳಿಗೆ ಪ್ರಶಸ್ತಿ ನೀಡಿ ಗೌರವಿಸಿದರು. ರಾಮನಗರ ಜಿಲ್ಲೆ ಡಿ.ಡಿ.ಪಿ.ಐ. ಹಾಗೂ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀಮತಿ ಫಾಮಿದ ರಹೀಂ ಅವರು, ಕ್ಷೇತ್ರ ಶಿಕ್ಷಣಾಧಿಕಾರಿಯಾದ ಶ್ರೀ ಹೆಚ್. ಶಿವರಾಮೇಗೌಡರು, ಆರ್.ಇ.ಎಸ್. ಶಿಕ್ಷಕ ತರಬೇತಿ ಕೇಂದ್ರ ಪ್ರಾಂಶುಪಾಲ ಶ್ರೀ ಎನ್.ಹೆಚ್. ಸ್ವಾಮಿಗೌಡ ಹಾಗೂ ಪ್ರಗತಿ ವಿದ್ಯಾ ನಿಕೇತನದ ಸ್ಥಾಪಕ ಹಾಗೂ ರಾಮನಗರ ಜಿಲ್ಲಾ ಸ್ಕೌಟ್- ಗೈಡ್ ಸಂಸ್ಥೆ ಕಾರ್ಯದರ್ಶಿ ಶ್ರೀ ಶಿವನಂಜಪ್ಪ ಉಪಸ್ಥಿತರಿದ್ದರು.

ದಿನಾಂಕ 13 ಅಕ್ಟೋಬರ್ 2008 ರಂದು ದಾವಣಗೆರೆಜಿಲ್ಲೆ, ಜಗಳೂರು ತಾಲ್ಲೂಕು, ಹಾಲೇಕಲ್ಲು ಗ್ರಾಮದಲ್ಲಿ ಜರುಗಿದ ಶ್ರೀ ಗವಿ ಸಿದ್ದೇಶ್ವರ ಪ್ರೌಢಶಾಲೆಯ ರಜತಮಹೋತ್ಸವ, ಕಂಪ್ಯೂಟರ್ ಕಟ್ಟಡ ಉದ್ಘಾಟನೆ ಮತ್ತು ಕ್ರೀಡಾಂಗಣದ

ಶಿಲಾನ್ಯಾಸ ಕಾರ್ಯಕ್ರಮಗಳ ಸಮಾರಂದಲ್ಲಿ ಭಾಗವಹಿಸಿದ್ದೆ. ಸಮಾರಂಭದಲ್ಲಿ ರಾಜ್ಯದ ಕೃಷಿ ಸಚಿವರಾದ ಶ್ರೀ ಎಸ್. ಎ. ರವೀಂದ್ರನಾಥ್, ಲೋಕಸಭಾ ಸದಸ್ಯರಾದ ಶ್ರೀ ಜಿ.ಎಂ. ಸಿದ್ದೇಶ್ವರ, ಜಗಳೂರು ಕ್ಷೇತ್ರದ ಶಾಸಕರಾದ ಶ್ರೀ ಎಸ್. ವಿ. ರಾಮಚಂದ್ರಪ್ಪ ಹಾಗೂ ಹಲವಾರು ಹಿರಿಯರು ಭಾಗವಹಿಸಿದ್ದರು. ಹಾಲೇಕಲ್ಲು ಗ್ರಾಮದವರೂ, ಸ್ಕೌಟ್ ಸಂಸ್ಥೆಯ ರಾಜ್ಯ ಪರಿಷತ್ತಿನ ಮಾಜಿ ಸದಸ್ಯರೂ – ಸಂಸ್ಥೆಯ ಕೆಲಸಗಳಿಗೆ ಸದಾ ಬೆಂಬಲಿಸುತ್ತಿರುವ ಶ್ರೀ ಎಂ.ಜಿ. ಮಹದೇವಪ್ಪ ಅಧ್ಯಕ್ಷರಾಗಿರುವ ಊರಿನ "ಹಳೇ ವಿದ್ಯಾರ್ಥಿಗಳ ಸಂಘ" ನಡೆಸುತ್ತಿರುವ ಶ್ರೀ ಗವಿಸಿದ್ಧೇಶ್ವರ ಪ್ರೌಢಶಾಲೆ 5 ಎಕರೆ ಪ್ರದೇಶದಲ್ಲಿದ್ದು ಉತ್ತಮ ಪರಿಸರದಲ್ಲಿ ನಿರ್ಮಾಣಗೊಂಡಿದೆ. ನಾನೂ ಸಮಾರಂಭದಲ್ಲಿ ಮಾತನಾಡಿ ಸ್ಕೌಟ್-ಗೈಡ್ ಚಟುವಟಿಕೆಗಳಿಗೆ ಪ್ರೋತ್ಸಾಹಿಸಬೇಕೆಂದು ಮಾನ್ಯ ಸಚಿವರು, ಸಂಸದರು, ಶಾಸಕರು ಹಾಗೂ ಉಪಸ್ಥಿತರಿದ್ದರೆಲ್ಲರಲ್ಲಿ ಕೋರಿದ್ದೇನೆ.

ದಿನಾಂಕ 22 ಅಕ್ಟೋಬರ್ 2008 ರಂದು ದೊಡ್ಡಬಳ್ಳಾಪುರದ ಡಾ. ಅನಿಬೆಸೆಂಟ್ ತರಬೇತಿ ಕೇಂದ್ರದಲ್ಲಿ ಜರುಗಿದ ವೃಕ್ಷಮಣಿ ತರಬೇತಿ, ಮುಂದುವರೆದ ತರಬೇತಿ, ರೋವರ್ ನಾಯಕರ ತರಬೇತಿ, ಮುಂದುವರೆದ ಕಬ್ ತರಬೇತಿಗಳ ಮುಕ್ತಾಯ ಸುಮಾರಂಭದಲ್ಲಿ ಭಾಗವಹಿಸಿದ್ದೆ. ಸಮಾರೋಪಕ್ಕೆ ಮುಖ್ಯ ಅತಿಥಿಯಾಗಿ ಆಗಮಿಸಿದ್ದ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ಕಾರ್ಯದರ್ಶಿಗಳಾದ ಶ್ರೀ ಐ.ಎಂ. ವಿಠಲಮೂರ್ತಿ ಅವರು ರಾಜ್ಯದ 23 ಜಿಲ್ಲೆಗಳಿಂದ ಆಗಮಿಸಿದ 115 ಶಿಬಿರಾರ್ಥಿಗಳು ಹಾಗೂ ರಾಜಸ್ಥಾನ ಮತ್ತು ಕರ್ನಾಟಕದ ಬೀದರ್ ನಿಂದ ಬಂದಿದ್ದ ಸಾಂಸ್ಕೃತಿಕ ವಿನಿಮಯ ತಂಡಗಳ ಸದಸ್ಯರನ್ನು ಉದ್ದೇಶಿಸಿ ಮಾತನಾಡಿ ಸ್ಕೌಟ್-ಗೈಡ್ ಚಳವಳಿಯ ಚಿಂತನೆ. ಆದರ್ಶಗಳು ಅವಶ್ಯವಾಗಿ ಎಲ್ಲಾ ಶಾಲೆಗಳನ್ನು ಮುಟ್ಟಬೇಕೆಂದು ಆಶಿಸಿದರು. ತಾವು ಸಂಸ್ಥೆಯ ಚಟುವಟಿಕೆಗಳನ್ನು ಕಳೆದ ಎರಡು ದಶಕಗಳಿಂದ ಹತ್ತಿರದಿಂದ ಕಂಡಿದ್ದು, ಸರ್ಕಾರ ಸ್ಕೌಟ್-ಗೈಡ್ ಚಳವಳಿಗೆ ಹೆಚ್ಚಿನ ಒತ್ತು ನೀಡಬೇಕೆಂದು ತಾವು ಈ ಬಗ್ಗೆ ಸೂಕ್ತ ನೆರವು ನೀಡುವುದಾಗಿಯೂ ಭರವಸೆ ನೀಡಿದರು.

ಈ ಸಂದರ್ಭದಲ್ಲಿ ಡಾ. ಅನಿಬೆಸೆಂಟ್ ತರಬೇತಿ ಕೇಂದ್ರದ ಅಭಿವೃದ್ಧಿಗಾಗಿ ಸಿದ್ಧಪಡಿಸಿದ ಯೋಜನಾ ನಕ್ಷೆಯ ವಿವರಗಳನ್ನು ಮಾನ್ಯ ಕಾರ್ಯದರ್ಶಿಯವರಿಗೆ ಯೋಜನಾ ನಕ್ಷೆ ತಯಾರಿಕಾ ಸಂಸ್ಥೆ ಮೆ: ನಿರ್ಮಾಣ್‌ನ ಮುಖ್ಯಸ್ಥರಾದ ಶ್ರೀ ಸಿ.ಕೆ. ನರೇಂದ್ರನಾಥ್ ವಿವರಿಸಿದರು. ಈಗಾಗಲೇ ರಾಜ್ಯ ಸರ್ಕಾರಕ್ಕೆ ರೂ. 31 ಕೋಟಿ ವೆಚ್ಚದ ಪ್ರಸ್ತಾವನೆ ಸಲ್ಲಿಸಿದ್ದು-2008-09ನೇ ಯೋಜನಾ ಅನುದಾನದಲ್ಲಿ ರೂ. 2. ಕೋಟಿ ಮುಂಜೂರಾಗಿರುವುದನ್ನು ಕಾರ್ಯದರ್ಶಿಗಳ ಗಮನಕ್ಕೆ ತರಲಾಯಿತು. ಮಾನ್ಯ ಕಾರ್ಯದರ್ಶಿಯವರು ತರಬೇತಿ ಕೇಂದ್ರದಲ್ಲಿರುವ ಸೌಲಭ್ಯಗಳ ವಿವರಗಳು ಮತ್ತು ನೂತನ ಯೋಜನಾ ನಕ್ಷೆಯಲ್ಲಿ ಯೋಜಿಸಿರುವ ಮೂಲಭೂತ ಸೌಕರ್ಯಗಳ ವಿವರಗಳನ್ನು ಪಡೆದು ಸರ್ಕಾರದಿಂದ ಹೆಚ್ಚಿನ ಅನುದಾನವನ್ನು ಈ ವರ್ಷದ ಅಂತ್ಯದಲ್ಲಿ ಕೊಡಿಸಿಕೊಡುವುದಾಗಿ ತಿಳಿಸಿದರು.

ದಿನಾಂಕ 24 ಅಕ್ಟೋಬರ್ 2008 ರಂದು ರಾಜ್ಯ ಕಚೇರಿಯಲ್ಲಿ ಜರುಗಿದ ಜಿಲ್ಲಾ ಮುಖ್ಯ ಆಯುಕ್ತರ, ಆಯುಕ್ತರುಗಳ ಹಾಗೂ ಕಾರ್ಯದರ್ಶಿಗಳ ಮತ್ತು ರಾಜ್ಯ ಯೋಜನಾ ಸಭೆಗೆ 19 ಜಿಲ್ಲೆಗಳಿಂದ 47 ಪ್ರತಿನಿಧಿಗಳು ಭಾಗವಹಿಸಿದ್ದು, ರಾಜ್ಯ ಮತ್ತು ಜಿಲ್ಲಾ ಸಂಸ್ಥೆಗಳ ಕಾರ್ಯಕ್ರಮಗಳು, ತರಬೇತಿ ಶಿಬಿರಗಳು, ರ್‍ಯಾಲಿಗಳು ನಡೆಸಿರುವ ಬಗ್ಗೆ, ರಾಷ್ಟ್ರಪತಿ ಮತ್ತು ರಾಜ್ಯ ಪುರಸ್ಕಾರ ತರಬೇತಿ ನೀಡುವುದು ಮತ್ತು ಸಂಬಂದಪಟ್ಟ ದಾಖಲಾತಿಗಳ ಬಗ್ಗೆ, ಜಿಲ್ಲೆಗಳು ಇದುವರೆಗೆ ಸಂಗ್ರಹಿಸಿರುವ ಗಣತಿ ಬಗ್ಗೆ ಮತ್ತು ಚಳವಳಿಯನ್ನು ರಾಜ್ಯದೆಲ್ಲೆಡೆ ಬೆಳೆಸುವ ಹಲವಾರು ಚಿಂತನೆ-ವಿವರಗಳನ್ನು ಕೂಲಂಕಷವಾಗಿ ಚರ್ಚಿಸಲಾಯಿತು. ರಾಜ್ಯ ಸಂಸ್ಥೆಯ ಪದಾಧಿಕರಿಗಳು ಹಾಗು ತರಬೇತಿ-ಸಂಘಟನಾ ತಜ್ಞರು ಭಾಗವಹಿಸಿದ್ದರು.

**ಬೆಳಕಿನ ಹಬ್ಬ ದೀಪಾವಳಿ ಮತ್ತು ನಾಡಹಬ್ಬ ಕನ್ನಡ ರಾಜ್ಯೋತ್ಸವ ನಮಗೆಲ್ಲಾ ಹೆಚ್ಚಿನ ಬೆಳಕು-ಉತ್ಸಾಹ ಸಂಭ್ರಮಗಳನ್ನು ಸದಾ ನೀಡಲೆಂದು ಪ್ರಾರ್ಥಿಸುತ್ತೇನೆ.**

ತಮ್ಮ ವಿಶ್ವಾಸಿ

ಸ್ಕೌಟ್-ಗೈಡ್ ವಂದನೆಗಳೊಂದಿಗೆ,

**ಕೊಂಡಜ್ಜಿ ಬ. ಷಣ್ಮುಖಪ್ಪ**

# ಸ್ಕೌಟ್ ಕೌಶಲ್ಯ

## ಶಿಬಿರಾಗ್ನಿ ಉದಂತ ಸಂ – 3

# ಸ್ಕೌಟ್ ಆಗುವುದು

..............ಹಿಂದಿನ ಸಂಚಿಕೆಯಿಂದ

## ಸ್ಕೌಟ್ ಸಮವಸ್ತ್ರ

ಸ್ಕೌಟ್ ಸಮವಸ್ತ್ರವು ಸ್ವಲ್ಪ ಹೆಚ್ಚು ಕಡಿಮೆ, ನಾನು ಅಧಿಪತಿ ಆಗಿದ್ದ ಆಫ್ರಿಕಾದ ಪೋಲೀಸು ದಳದವರು, ಧರಿಸುತ್ತಿದ್ದ ಸಮವಸ್ತ್ರದಂತೆಯೇ ಇದೆ. ಅದು ಧರಿಸಲು ಹಿತಕರವಾಗಿದ್ದು, ಬಾಳಿಕೆ ಬರುವುದೆಂದೂ, ಹವಾಮಾನದ ವೈಪರೀತ್ಯಗಳಿಗೆ ರಕ್ಷಣೆ ನೀಡುವುದೆಂದೂ ಅವರಿಗೆ ಗೊತ್ತು. ಅದಕ್ಕಾಗಿಯೇ ಸ್ಕೌಟುಗಳಿಗೆ, ಹೆಚ್ಚು ಕಡಿಮೆ ಅಂತಹುದೇ ಸಮವಸ್ತ್ರವಿದೆ.

ಹಲವು ಸಣ್ಣಪುಟ್ಟ ಬದಲಾವಣೆಗಳನ್ನು ಬಿಟ್ಟರೆ, ಮೂಲತಃ ಇದ್ದ ಸ್ಕೌಟ್ ಸಮವಸ್ತ್ರವನ್ನು ವಿಶ್ವಾದ್ಯಂತ, ಒಪ್ಪಿಕೊಂಡಿರುತ್ತಾರೆ. ಇದು ಎಲ್ಲಾ ಸ್ಕೌಟುಗಳ ಭಾವನೆಗಳಿಗೂ ಪೂರಕವಾಗಿದೆ. ಹವಾಮಾನ ವೈಪರೀತ್ಯಗಳಿರುವ ಕಡೆ ಅದಕ್ಕನುಗುಣವಾಗಿ ಅದನ್ನು ಬದಲಾಯಿಸಿಕೊಳ್ಳಲೇ ಬೇಕಾಗುತ್ತದೆ.

ಒಟ್ಟಿನಲ್ಲಿ ಹೇಳುವುದಾದರೆ, ಸಮಶೀತೋಷ್ಣವಲಯದ ಎಲ್ಲಾ ರಾಷ್ಟ್ರಗಳಲ್ಲಿಯೂ ಸಮವಸ್ತ್ರವು ಒಂದೇ ರೀತಿಯದಾಗಿದೆ.

ಮೇಲಿನಿಂದ ಪ್ರಾರಂಭಿಸೋಣ. ತಲೆಯ ಮೇಲೆ ಬೆರ್ರೆ. ಇದರಿಂದ ಮಳೆ ಬಿಸಿಲುಗಳಿಂದ ರಕ್ಷಣೆ ದೊರಕುತ್ತದೆ. ಬೆರ್ರೆಗೆ ಲೋಹದ ಪದಕವಿರುತ್ತದೆ. ಬಳಿಕ ಬರುವುದು ಕಂಠವಸ್ತ್ರ/ಸ್ಕಾರ್ಫ್. ಕುತ್ತಿಗೆಯ ಹಿಂಭಾಗದಲ್ಲಿ ತ್ರಿಕೋಣದ ತುದಿಯು ಬರುವಂತೆ ಸುರುಳಿ ಸುತ್ತಲಾಗುತ್ತದೆ. ಪ್ರತಿ ದಳಕ್ಕೂ ಅದರದೇ ಆದ ಬಣ್ಣದ ಕಂಠವಸ್ತ್ರವಿರುತ್ತದೆ. ಕಂಠವಸ್ತ್ರವು ದಳದ ಗೌರವದ ಸಂಕೇತವಾಗಿರುವುದರಿಂದ, ನೀವು ಅದನ್ನು ಎಚ್ಚರವಹಿಸಿ ಅಂದವಾಗಿಯೂ, ಚೊಕ್ಕವಾಗಿಯೂ ಇಟ್ಟುಕೊಳ್ಳಬೇಕು. ಕಂಠದ ಬಳಿ ಇದಕ್ಕೆ ಗಂಟು ಹಾಕಬಹುದು. ಇಲ್ಲದಿದ್ದರೆ ವೋಗಲ್ ಉಪಯೋಗಿಸಬಹುದು. ವೋಗಲ್ಲನ್ನು ದಾರ, ಲೋಹ, ಮೂಳೆ ಅಥವಾ ಇನ್ನಾವುದೇ ಪದಾರ್ಥದಿಂದ ತಯಾರಿಸಿಕೊಳ್ಳಬಹುದು. ಕುತ್ತಿಗೆಯು, ಬಿಸಿಲಿನಿಂದ ಸುಡದಂತೆ ಕಂಠವಸ್ತ್ರವು ರಕ್ಷಣೆ ನೀಡುತ್ತದೆ. ಅದರಿಂದ ಇನ್ನೂ ಅನೇಕ ರೀತಿಯ ಉಪಯೋಗಗಳುಂಟು. ಉದಾ: ಪ್ರಥಮ ಚಿಕಿತ್ಸೆಯಲ್ಲಿ ಮುಮ್ಮೂಲೆ ಪಟ್ಟಿ; ತುರ್ತು ಸಂದರ್ಭಗಳಲ್ಲಿ ಹಗ್ಗದಂತೆ ಉಪಯೋಗಿಸಬಹುದು.

## ಸ್ಕೌಟ್ ಷರ್ಟ್ ಅಥವಾ ಜರ್ಸಿ :

ಬೂದು ಬಣ್ಣದ್ದಾಗಿರಬೇಕು. ತೊಡಲು ಸುಲಭವಾಗಿಯೂ ಮತ್ತು ಸಲೀಸಾಗಿಯೂ ಇರಬೆಕು. ತೋಳುಗಳನ್ನು ಮೇಲಕ್ಕೆ ಮಡಚಿದಾಗ ಇದಕ್ಕಿಂತಲೂ ಸುಖಕರವಾದುದು ಬೇರೆ ಇಲ್ಲ. ತೋಳುಗಳನ್ನು ಮೇಲಕ್ಕೆ ಮಡಚಿದಾಗ ಹೆಚ್ಚು ಅಡೆತಡೆಗಳಿಲ್ಲದೆ ಇರುತ್ತದೆ. ಅಷ್ಟೇ ಅಲ್ಲ. ಸ್ಕೌಟುಗಳು ತಮ್ಮ ಧ್ಯೇಯವನ್ನು ಸಾಧಿಸಲು, ಸದಾ ಸಿದ್ಧರಾಗಿರುತ್ತಾರೆ ಎಂಬುದಕ್ಕೂ ಇದು ಗುರುತಾಗಿದೆ. ಚಳಿಯಿಂದ ನಡುಗದಂತೆ, ಬಿಸಿಲಿನಿಂದ ಸುಡದಂತೆ ಇರಲು ಮಾತ್ರ ತೋಳುಗಳನ್ನು ಕೆಳಗೆ ಬಿಡುತ್ತಾರೆ. ಚಳಿಯ ಹವೆಯಲ್ಲಿ. ಷರ್ಟಿನ ಒಳಗೋ ಅಥವಾ ಮೇಲೆಯೋ ಬೆಚ್ಚಗಿರುವ ಉಡುಪನ್ನು ಧರಿಸಬಹುದು.

## ಚಡ್ಡಿ (Shorts) ಅಥವಾ ಪ್ಯಾಂಟ್ :

ನೀಲಿಯ ಬಣ್ಣದ್ದಾಗಿರಬೇಕು. ಕಷ್ಟಪಟ್ಟು ಕೆಲಸ ಮಾಡಬೇಕಾದರೆ ಚಡ್ಡಿ ಇರಬೇಕು. ಮೇಲೆ ಹತ್ತುವುದಕ್ಕೆ, ಹೈಕಿಂಗ್‌ಗೆ ಮತ್ತು ಕ್ಯಾಂಪಿಂಗ್‌ಗೆ ಸಹ ಇದರ ಅವಶ್ಯಕತೆಯಿದೆ. ಖರ್ಚೂ ಕಡಿಮೆ ಮತ್ತು ಪ್ಯಾಂಟ್‌ಗಿಂತಲೂ ಹೆಚ್ಚು ಹಿತಕರವಾದುದು; ಆರೋಗ್ಯಕರವಾದುದೂ ಕೂಡ. ಕಾಲುಗಳಿಗೆ ಸ್ವೇಚ್ಛೆಯನ್ನೂ, ಧಾರಾಳವಾದ ಗಾಳಿಯನ್ನೂ ಕೊಡುತ್ತದೆ. ಇದರಿಂದ ದೊರಕುವ ಮತ್ತೊಂದು ಸೌಕರ್ಯವೆಂದರೆ, ನೆಲವು ಹಸಿಯಾಗಿದ್ದರೆ ಮತ್ತು ಕೊಚ್ಚೆಯಾಗಿದ್ದರೆ, ಕಾಲುಚೀಲಗಳನ್ನು ತೆಗೆದಿಟ್ಟು ಬೇರಾವ ಬಟ್ಟೆಗಳೂ ಒದ್ದೆಯಾಗದಂತೆ ಹಾಯಾಗಿ ಓಡಾಡಬಹುದು, ಭಾರತದಲ್ಲಿ ಸ್ಕೌಟ್‌ಗಳು ಪ್ಯಾಂಟ್‌ಗಳನ್ನೂ ಧರಿಸಬಹುದು.

## ಸ್ಟಾಕಿಂಗ್ಸ್ (ಕಾಲುಚೀಲಗಳು) :

ಕಪ್ಪು ಬಣ್ಣದ್ದಾಗಿರಬೇಕು. ಇವುಗಳನ್ನು ಯಥಾಸ್ಥಾನದಲ್ಲಿಡಲು (ಮೊಣಕಾಲಿನಿಂದ ಎರಡು ಬೆರಡಳುಗಳ ಕೆಳಗೆ) ಗಾರ್ಟರ್‌ಗಳಿಂದ ಕಟ್ಟಬೇಕು. ಈ ಗಾರ್ಟರ್‌ಗಳಿಗೆ ಕಾಲುಚೀಲಗಳ ಮಡಿಕೆಯಿಂದ ಹೊರಕ್ಕೆ ಕಾಣುವಂತೆ (2 ಸೆಂ.ಮೀ. ಉದ್ದ ಕಾಣಬೇಕು) ಹಸಿರು ಬಣ್ಣದ ಗಾರ್ಟರ್ ಟ್ಯಾಬ್‌ಗಳಿರುತ್ತವೆ. ಪ್ಯಾಂಟ್ ಧರಿಸಿದಾಗ ಕರಿಯ ಬಣ್ಣದ ಸಾಕ್ಸ್ ಧರಿಸಬಹುದು. ನನ್ನ ಅಭಿಪ್ರಾಯದಲ್ಲಿ ಬೂಟ್‌ಗಳಿಗಿಂತಲೂ, ಷೂಗಳುಮೇಲು. ಷೂಗಳಲ್ಲಿ ಪಾದಗಳಿಗೆ ಹೆಚ್ಚು ಗಾಳಿಯಾಡುವ ಅವಕಾಶವಿದೆ. ಬೂಟ್‌ಗಳನ್ನು ಲೇಸ್‌ಗಳಿಂದ ಬಿಗಿದು ಕಟ್ಟಿದಾಗ, ಕಾಲುಚೀಲಗಳು, ಗಾಳಿಯಾಡದೆ ಒದ್ದೆಯಾಗಿ, ಪಾದಗಳಿಗೆ ತೇವವು ತಗುಲಿ, ಚರ್ಮವು ಸುಲಿದಂತೆ ಆಗುವ, ಶೈತ್ಯವುಂಟಾಗುವ (ಚಳಿಯಿಂದ ಕಾಲು ಜಡವಾಗುವ) ಅಪಾಯವಿದೆ.

## ಸಮವಸ್ತ್ರವನ್ನು ಧರಿಸುವುದು

ಸ್ಕೌಟ್ ಸರಂಜಾಮು ಚೀಲವು (Scout Kit) ತನ್ನ ಸಮಾನತೆಯಿಂದ, ವಿಶ್ವದಾದ್ಯಂತ ಬಾಲಕರನ್ನು 'ಸೋದರತೆಯ ಬಂಧನ'ದಲ್ಲಿ ಬಿಗಿಸುವ ಸಾಧನವಾಗಿದೆ.

ಸಮವಸ್ತ್ರವನ್ನು ಸರಿಯಾಗಿ ಧರಿಸಿ, ಪ್ರತಿ ಸ್ಕೌಟೂ ಸೂಟಿಯಾಗಿ (Smart) ವ್ಯವಹರಿಸಬಲ್ಲನಾದರೆ ಅದು ಸಂಸ್ಥೆಗೆ ಖ್ಯಾತಿಯನ್ನು ತರುತ್ತದೆ. ಸ್ಕೌಟಿಗೆ ತನ್ನ ಬಗ್ಗೆಯೂ, ತನ್ನ ದಳದ ಬಗ್ಗೆಯೂ, ಹೆಮ್ಮೆ ಎನಿಸುತ್ತದೆ.

ಅದೇ ಒಬ್ಬ ಸೋಮಾರಿ, ಕೊಳಕು ಬಾಲಕನು ಸ್ಕೌಟ್ ಆದರೆ, ತನ್ನ ಸಮವಸ್ತ್ರವನ್ನು ಎಚ್ಚರಗೇಡಿತನದಿಂದ ಧರಿಸುತ್ತಾನೆ. ಇದರಿಂದ ಸಾರ್ವಜನಿಕ ದೃಷ್ಟಿಯಲ್ಲಿ ಇಡೀ ಸಂಸ್ಥೆಯು ತಲೆ ತಗ್ಗಿಸುವಂತೆ ಆಗುತ್ತದೆ. ಅಂತಹ ಸೋಮಾರಿಯನ್ನು ತೋರಿಸುವಿರಾದರೆ, ಸ್ಕೌಟಿಂಗಿನ ಆಂತರಿಕ ಭಾವನೆಗಳನ್ನು ಅರ್ಥಮಾಡಿಕೊಳ್ಳದ ಬಾಲಕನೇ ಅವನೆಂದು ಹೇಳಬಹುದು. ನಮ್ಮ ವಿಶ್ವ ಸೋದರತೆಯ ಬಗ್ಗೆ ಹೆಮ್ಮೆಪಡದೇ ಇರುವ ಬಾಲಕನೆಂದೂ ಹೇಳಬಹುದು.

## ಸ್ಕೌಟ್ ದಂಡ

ಸ್ಕೌಟ್ ದಂಡವು ಸ್ಕೌಟ್ ಕಿಟ್‌ನ ಉಪಯುಕ್ತ ಸೇರಿಕೆಯಾಗಿದೆ. ನನ್ನ ಅಭಿಪ್ರಾಯದಲ್ಲಿ, ಗುಡ್ಡಗಾಡಿನ, ಬಂಡೆಗಳಿಂದ ಕೂಡಿದ, ಪರ್ವತ ಪ್ರದೇಶದಲ್ಲಿ ಹಾದುಹೋಗುವಾಗ, ರಾತ್ರಿಯ ವೇಳೆ, ಕಾಡು ಅಥವಾ ನಿರ್ಜನ ಅಡವಿ ಪ್ರದೇಶದಲ್ಲಿ, ಕಾರ್ಯನಿರತರಾದಾಗ, ದಂಡವು ವಿಶೇಷ ರೀತಿಯ ಅಮೂಲ್ಯವಾದ ಸಂಗಾತಿಯೆನಿಸುತ್ತದೆ. ಅಷ್ಟೇ ಅಲ್ಲದೆ, ತನ್ನ ಸಾಧನೆಗಳನ್ನು ವಿವಿಧ ಚಿಹ್ನೆಗಳ ರೂಪದಲ್ಲಿ ಅದರ ಮೇಲೆ ಕೆತ್ತನೆಯ ಕೆಲಸ ಮಾಡಿದಾಗ, ಅದು ಅವನ ಸಾಧನೆಯ ಸಾಕ್ಷ್ಯಲಿಖಾವಟ್ಟಾಗುತ್ತದೆ ಮತ್ತು ಆ ಸ್ಕೌಟ್‌ನ ಮೆಚ್ಚಿನ ಸಂಗಾತಿಯಾಗುತ್ತದೆ.

ಸ್ಕೌಟ್ ದಂಡವು ಹತ್ತಾರು ರೀತಿಗಳಲ್ಲಿ ಉಪಯೋಗಕ್ಕೆ ಬರುತ್ತದೆ. ಉದಾ: ಡೋಲಿಯನ್ನು ಮಾಡಲು; ಗುಂಪುಗೂಡಿದ ಜನರನ್ನು ನಿಯಂತ್ರಿಸಲು; ಕಾಲುವೆ ಹಾರಲು; ನದಿಯ ಆಳವನ್ನು ಕಂಡುಹಿಡಿಯಲು; ಕತ್ತಲು ಹೊತ್ತಿನಲ್ಲಿ ಪೆಟ್ರೋಲ್‌ನ ಸದಸ್ಯರು ಒಟ್ಟಿಗಿರಲು; ಎತ್ತರವಾದ ಗೋಡೆಯನ್ನು ಹತ್ತಲು (ನೀವು ದಂಡವನ್ನು ಅಡ್ಡಡ್ಡವಾಗಿ ಹಿಡಿದು, ಜೊತೆಯವನಿಗೆ ಮೆಟ್ಟಲು ಮಾಡಿಕೊಡಿ. ಅವನು ಮೇಲೆ ಹೋದಮೇಲೆ, ಅವನು ನಿಮಗೆ ಮೇಲೇರಲು ಸಹಾಯ ಮಾಡುತ್ತಾನೆ.)

**ಸ್ಕೌಟ್ ದಂಡವು ಹಲವಾರು ಹೊರಾಂಗಣದ (ಬಯಲು ಪ್ರದೇಶದ) ಚಟುವಟಿಕೆಗಳಲ್ಲಿ, ಉಪಯೋಗಕ್ಕೆ ಬರುತ್ತದೆ.**

ಕೆಲವಾರು ದಂಡಗಳನ್ನು ಒಟ್ಟು ಸೇರಿಸಿ ಸೇತುವೆ ನಿರ್ಮಿಸಬಹುದು. ಧ್ವಜಸ್ಥಂಭವನ್ನು ಕಟ್ಟಬಹುದು. ಹೀಗೆಯೇ ಹತ್ತಾರು ಇತರ ಉಪಯೋಗಗಳನ್ನು ಪಟ್ಟಿಮಾಡಬಹುದು.

ನಿಮ್ಮಲ್ಲಿ ದಂಡವೇ ಇಲ್ಲದಿದ್ದರೆ, ನಿಮಗೆ ಅದು ಇರಬೇಕಾದುದುರ, ಅವಶ್ಯಕತೆಯ, ಅರಿವುಂಟಾಗುತ್ತದೆ.

ಅವಕಾಶವೊದಗಿದಾಗ, ಸೂಕ್ತ ಕ್ರಮಗಳನ್ನನುಸರಿಸಿ, ನಿಮ್ಮ ದಂಡವನ್ನು ನೀವೇ ಮಾಡಿಕೊಳ್ಳಿ.

........................ಮುಂದುವರೆಯುವುದು

## ದಯವಿಟ್ಟು ಗಮನಿಸಿ

**2008-09ನೇ ಸಾಲಿನಲ್ಲಿ ಜಿಲ್ಲೆಗಳಿಗೆ ನಿಗದಿಪಡಿಸಿರುವ ಸ್ಕೌಟ್ಸ್ ಮತ್ತು ಗೈಡ್ಸ್ ಗಣತಿಯನ್ನು ಪೂರ್ಣಗೊಳಿಸಲು ಹಾಗೂ ಈಗಾಗಲೇ ವಿವಿದ ಹಂತಗಳಲ್ಲಿ ಸಂಗ್ರಹಿಸಿರುವ ದಳಗಳ ನವೀಕರಣ ಶುಲ್ಕವನ್ನು ರಾಜ್ಯ ಕಾರ್ಯಾಲಯಕ್ಕೆ ತಕ್ಷಣ ಪಾವತಿಸಲು ಕೋರಿದೆ. 2008 ಡಿಸೆಂಬರ್ ಒಳಗಾಗಿ ನಿಮ್ಮ ಜಿಲ್ಲೆಗಳಲ್ಲಿ ತರಬೇತಿ ಶಿಬಿರ, ಸ್ಕೌಟರ್-ಗೈಡರ್‌ಮತ್ತು ವೃಕ್ಷಮಣಿದಾರಕರ ಸಮಾವೇಶ, ಶ್ರಮದಾನ ಶಿಬಿರ ಏರ್ಪಡಿಸಿರಿ.**

ಸಹಿ/- ರಾಜ್ಯ ಕಾರ್ಯದರ್ಶಿ

# ಯೋಗ

– ಗೊ.ರು. ಚನ್ನಬಸಪ್ಪ

'ಯೋಗ' ಎಂದರೆ ಚಿತ್ತವೃತ್ತಿ ನಿರೋಧ ಮತ್ತು ಜೀವಾತ್ಮ-ಪರಮಾತ್ಮರ ಮಿಲನ ಎಂಬ ವ್ಯಾಖ್ಯೆಯಿದೆ. ಯೋಗದಲ್ಲಿ ಅನೇಕ ಪ್ರಕಾರಗಳಿವೆ. ಪ್ರಮುಖವಾದ ಮಂತ್ರಯೋಗ, ಲಯಯೋಗ, ಹಠಯೋಗ ಮತ್ತು ರಾಜಯೋಗಗಳಂತೂ ಇದ್ದೇಇವೆ. ಇವಲ್ಲದೆ ಬೇರೆ ಬೇರೆ ಅನುಭವಗಳಿಗೆ ಅನುಗುಣವಾಗಿ ಕರ್ಮಯೋಗ, ಸಾಂಖ್ಯಯೋಗ, ಜ್ಞಾನಯೋಗ, ಧ್ಯಾನಯೋಗ, ವಿಜ್ಞಾನಯೋಗ, ವಿಭೂತಿಯೋಗ, ವೈರಾಗ್ಯಯೋಗ, ಮೋಕ್ಷಯೋಗ, ಪೂರ್ಣಯೋಗ ಎಂಬೆಲ್ಲ ಪ್ರಕಾರಗಳಿವೆ.

ಪ್ರಾಚೀನ ಪರಂಪರೆಯ ಈ ಯೋಗ ಪ್ರಕಾರಗಳ ಸ್ಥಾನದಲ್ಲಿ ನಾವೀಗ ಉದ್ಯೋಗಯೋಗ, ಅಧಿಕಾರಯೋಗ, ಧನಯೋಗ, ವಾಹನಯೋಗ, ವಸತಿಯೋಗ, ವಿವಾಹಯೋಗ, ಭೋಜನಯೋಗ ಇತ್ಯಾದಿ ಪ್ರಕಾರಗಳತ್ತ ಗಮನ ಹರಿಸಿದ್ದೇವೆ. ಈ ಹೊಸ ಯೋಗಗಳಿಂದ ಮಾನಸಿಕ ಒತ್ತಡವೂ ಸೇರಿದಂತೆ ಅನೇಕ ಹೊಸ ರೋಗಗಳಿಗೆ ಸಿಕ್ಕಿ ಪರಿತಪಿಸುತ್ತಿದ್ದೇವೆ. ಆದರೆ ನಿಜವಾದ ಯೋಗದ ಮೂಲಾಶಯ ವ್ಯಕ್ತಿಯನ್ನು ಈ ಮಾನಸಿಕ ಒತ್ತಡಗಳಿಂದ ಬಿಡುಗಡೆ ಮಾಡುವುದೇ ಆಗಿದೆ.

ಯೋಗದ ಅರ್ಥ ಕೇವಲ ಪರಮಾತ್ಮ ಪ್ರಾಪ್ತಿಯಲ್ಲ. ವ್ಯಕ್ತಿಯ ಅಂತರಂಗ, ಬಹಿರಂಗಗಳ ಪರಿವರ್ತನೆ ಅದರಿಂದ ಸಾಧ್ಯವಾಗುತ್ತದೆ. ಯೋಗತಜ್ಞರು ಹೇಳುವಂತೆ ಹಠಯೋಗ ಶರೀರಕ್ಕೆ ಚಿಕಿತ್ಸೆಯಾದರೆ, ಲಯಯೋಗ ಪ್ರಾಣಕ್ಕೆ ಚಿಕಿತ್ಸೆಯಾಗುತ್ತದೆ. ಮಂತ್ರಯೋಗ ಮನಕ್ಕೆ ಚಿಕಿತ್ಸೆ ನೀಡಿದರೆ, ರಾಜಯೋಗ ಬುದ್ಧಿಗೆ ಚಿಕಿತ್ಸೆ ನೀಡುತ್ತದೆ. ದೀಪವಿದ್ದಲ್ಲಿ ಕತ್ತಲೆಗೆ ಸ್ಥಾನವಿರುವುದಿಲ್ಲ. ಅಂತೇ ಯೋಗದ ಬಲವಿದ್ದರೆ ಅಂತರಂಗದ ಕತ್ತಲೆ ಕಳೆದು ಜ್ಞಾನದ ಬೆಳಕು ಮೂಡುತ್ತದೆ.

ಶುದ್ಧ ಯೋಗಿಯಲ್ಲಿ ಮಾನಸಿಕ ಬ್ರಹ್ಮಚರ್ಯೆ, ಸಹನಶೀಲತೆ, ಗುಣಗ್ರಹಣ ಶಕ್ತಿ, ಅರ್ಪಣಾಭಾವ, ನಿರ್ಭಯತೆ, ಹರ್ಷೋತ್ಸಾಹ, ಸರಳತೆ, ವಿನಮ್ರತೆ, ಸದಾ ಜಾಗೃತಿ, ಒಟ್ಟಾರೆ ಜೀವನ ಪ್ರಜ್ಞೆ – ಇವುಗಳು ತುಂಬಿಕೊಂಡಿರುತ್ತವೆ.

ವ್ಯಕ್ತಿ ಚೈತನ್ಯವನ್ನು ವಿಶ್ವಚೈತನ್ಯದಲ್ಲಿ ಸಮರಸಗೊಳಿಸುವುದೇ 'ಯೋಗ' ಎಂದು ಹೇಳಲಾಗಿದೆ. ಇಂತಹ ಯೋಗಸಾಧನೆಗೆ ಶ್ರದ್ಧೆಯ ಅಭ್ಯಾಸ ಅಗತ್ಯವಾಗುತ್ತದೆ. ಯೋಗಸಾಧನೆಗೆ ಮುಖ್ಯವಾದುದು ಮನೋನಿಯಂತ್ರಣ. ಮನುಷ್ಯನ ಮನಸ್ಸನ್ನು ಅರ್ಥಮಾಡಿಕೊಳ್ಳುವುದೇ ಕಷ್ಟ. ಡಿ.ವಿ.ಜಿ. ಅವರ ಮಂಕುತಿಮ್ಮನ ಕಗ್ಗದಲ್ಲಿ ಒಂದು ಪದ್ಯವಿದೆ : 'ಜನಕಜೆಯ ದರುಶನದಿನಾಯ್ತು ರಾವಣ ಚಪಲ, ಕನಕಮೃಗ ದರುಶನದೆ ಜಾನಕಿಯ ಚಪಲ, ಜನವವನ ನಿಂದಿಪುದು, ಕನಿಕರಿಪುದಾಕೆಯಲಿ, ಮನದ ಬಗೆಯರಿಯದದು ಮಂಕುತಿಮ್ಮ". ಇಲ್ಲಿ ಸೀತೆ ಮತ್ತು ರಾವಣ ಇಬ್ಬರಿಗೂ ಒಂದೇ ದೌರ್ಬಲ್ಯವಿದೆ; ಅದು ಚಪಲ. ಸೀತೆ ಜಿಂಕೆಯನ್ನು ಕಂಡು ಮೋಹಕ್ಕೊಳಗಾಗುತ್ತಾಳೆ. ರಾವಣ ಸೀತೆಯನ್ನು ಕಂಡು ಮೋಹಕ್ಕೊಳಗಾಗುತ್ತಾನೆ. ಇಬ್ಬರದೂ ಮೋಹಕ್ಕೊಳಗಾದ ಮನಸ್ಸೇ. ಆದರೆ ಲೋಕ ರಾವಣನನ್ನು ಕಾಮುಕ ಎಂದು ನಿಂದಿಸುತ್ತದೆ; ಸೀತೆಯ ಬಗೆಗೆ ಕನಿಕರ ತೋರುತ್ತದೆ. ಇವರಿಬ್ಬರಲ್ಲು

ಸಂಯಮ ಇದ್ದಿದ್ದರೆ ಮುಂದಾದ ಯುದ್ಧ ತಪ್ಪಿಸಬಹುದಾಗಿತ್ತು. ಆದರೆ ಮನೋನಿಗ್ರಹದ ಕೊರತೆಯಿಂದಾಗಿ ಇಬ್ಬರೂ ಕಷ್ಟಕ್ಕೆ ಒಳಗಾಗುತ್ತಾರೆ.

ಯೋಗಸಾಧನೆ ನಮ್ಮಲ್ಲಿ ಅಂತಹ ಸಂಯಮವನ್ನುಂಟುಮಾಡುತ್ತದೆ. ಚಿತ್ತವೃತ್ತಿ ನಿರೋಧವೆಂದರೆ ಈ ಸಂಯಮವೇ. ಹೊಯ್ದಾಡುವ, ವಿಕೃತವಾಗುವ ಮನಸ್ಸಿನಲ್ಲಿ ಸ್ಥಿರತೆಯುಂಟುಮಾಡುವುದೇ ಯೋಗದ ಗುರಿ. ಇದನ್ನೇ 'ಸಮಚಿತ್ತ' ಎಂದು ಕರೆಯಲಾಗುತ್ತದೆ.

ಮಹಾಕವಿ ಚಾಮರಸ ತನ್ನ 'ಪ್ರಭುಲಿಂಗ ಲೀಲೆ'ಯಲ್ಲಿ ಯೋಗದ ಸ್ವರೂಪವನ್ನು, ಪ್ರಭಾವನ್ನು ತುಂಬ ಅರ್ಥವತ್ತಾಗಿ ಹೇಳಿದ್ದಾನೆ :

ಆಲಿ ನಿಂದೊಡೆ ಸುಳಿದು ಸೂಸುವ
ಗಾಳಿ ನಿಲುವುದು, ಗಾಳಿ ನಿಲೆ ಮನ
ಮೇಲೆ ನಿಲುವುದು, ಮನವು ನಿಂದೊಡೆ ಬಿಂದು
ನಿಲುವುದು । ಲೀಲೆಯಿಂದಾ ಬಿಂದು ನಿಂದೊಡೆ
ಕಾಲ ಕರ್ಮವ ಗೆದ್ದು ಮಾಯೆಯ
ಹೇಳ ಹೆಸರಿಲ್ಲೆನಿಸಬಹುದ್ಯೆ ಬಸವ ಕೇಳೆಂದ ॥

ಇದನ್ನೇ ಶರಣರು 'ಶಿವಯೋಗ' ಎಂದರು. ಇದರ ಪರಿಣಾಮ – ಪ್ರಭಾವಗಳನ್ನು ಮಾತಿನಿಂದ ಹೇಳಲಾಗದು. ಅದೊಂದು ಪರಮಾನುಭವ. ಶಿವಯೋಗ ಸಾಧನೆಯಿಂದ ವ್ಯಕ್ತಿ ಪರಿಪೂರ್ಣವಾಗುತ್ತಾನೆ. ಪರಿಪೂರ್ಣನಾದ ವ್ಯಕ್ತಿಯಿಂದ ಪರಿಸರವೆಲ್ಲ ಪ್ರಭಾವಗೊಳ್ಳುತ್ತದೆ. ಕೊಳಕು ಹೋಗಿ ಬೆಳಕು ಮೂಡುತ್ತದೆ.

ಶುದ್ಧ ಶಿವಯೋಗಿ ಅಂತರ್ಮುಖಿಯಾಗುತ್ತಾನೆ. ಸಂಕಲ್ಪಸಿದ್ಧನಾಗುತ್ತಾನೆ. ಸಾತ್ವಿಕ ಶಕ್ತಿಯಾಗುತ್ತಾನೆ. ನಿರ್ಲಿಪ್ತದ ನಿಲುವಿನಲ್ಲಿ ನಿಲ್ಲುತ್ತಾನೆ. ಅವನ ವ್ಯಕ್ತಿ ಚೈತನ್ಯ ವಿಶ್ವ ಚೈತನ್ಯದಲ್ಲಿ ಲೀನವಾಗುತ್ತದೆ.

## *Coming Events - November 2008*

***State Level Preparatory Camp for Rajyapuraskar Scouts & Guides will be held at Kondajji Basappa Scouts & Guides Training Centre, Kondajji from 11th to 15th of November 2008. Depute Candidates as per quota alloted to your District Association - Contact SOC(S) & (G) for further details.***

***Sd/- State Secretary***

# ರಾಜ್ಯ ವಾರ್ತೆ

## "I Revived The Mahatma"

## 2 October 2008

The National Level Event "I Revived the Mahatma" and "Leprosy March" was organised by the Leprosy Mission under the Leprosy Awareness Programme at Bangalore. On 2nd October 2008. The Programme was organised in Association with the Bharat Scouts & Guides and Bishop Cotton Girls School, Bangalore & the Government of Karnataka. Every year the programme is organized by TLM Media Centre to mark the Birth Anniversary of Mahatma Gandhi.

Around 600 Scouts & Guides of Bharat Scouts & Guides and students participated in the "Leprosy March" flagged off by the Hon'ble Labour Minister of Karnataka Mr. B.N. Bachegowda at 9.00 a.m. in front of the Vidhan Soudha Bangalore. Through out the procession of around 4 kms. the Scouts & Guides shouted Slogans on Leprosy Awareness and were carrying the Slogans on Placards and Banners. Best Slogans were Awarded on the occasion. They also distributed the handbills on Leprosy to the public. The Students of "Leprosy March" later attended the IRM programme in the Bishop Cotton Girls School Auditorium.

In all, representatives from 29 states participated in the National level competition. "I Revived The Mahatma". In the competition, the students depicted like Mahatma Gandhi and made a speech on Leprosy. Mr. Jyoti Ranjan Mahakul of BSG Orissa, Mr. B. Ram Prasad of TLM Villupuram and Mr. Manik Saraswat of BSG Jammu & Kashmir were adjudged first, second and third respectively. Students with disability gave special items on the occasion. Mr. P.G.R. Sindhia, Hon'ble Former Finance & Industries Minister of Karanaka and Mr. H.T. Sangliana, Member of Parliament were the Chief Guests, the judges were Mr. Joseph Hoover (Environmentalist). Mr. V. Sreenivasa (Editor with Bangalore Mirror), Ms. Anita Reddy (Vice-President- Karnataka Chapter of Sarvodaya International Trust), Dr. Dinamani (SLO), Ms. Ava Kramer (Vice-Principal).

Dr. V. Dinamani, State Leprosy Officer, Govt. of Karnataka; Mr. K. B. Shanmukhappa, State Chief Commissioner, Bharat Scouts & Guides, Karnataka Sri T.S. Lucas and Miss Ravi wesley, State Commissioners and Sri R.L. Patil & Smt. S. Lalithama, Joint Directors of Dept. of Youth Services & Sports. Ms. Princess Franklyn, Principal, Bishop Cotton Girls School, Dr. D.P.N. Prasad, Chairman of TLM and Dr. Jeyakumar Daniel, Director of TLM attended the Programme.

[Note: Photos Published Seperately]

# State Level Training Courses

The following State Level Training Courses were held at Dr. Annie Besant Park, D.B. Pur. from 14th to 23 October 2008

| Sl. No. | Name of the course | Leader | Date | No. of Participants |
|---|---|---|---|---|
| 01 | Himalaya Wood Badge Course (Scout) | Sri. N. Srinivasan L.T. (S) | 14-10-08 To 23-10-08 | 25 |
| 02 | Himalay Wood Badge Course (Scout) | Sri. B. Ananda Adiga L.T. (S) | 14-10-08 To 23-10-08 | 26 |
| 03 | Advanced Course for Cub Masters | Sri. Muninarayanappa A. L.T. (C) | 16-10-08 To 23-10-08 | 11 |
| 04 | Advanced Course for Scout Masters | Sri. Jimmy Sequira A. L.T. (S) | 16-10-08 To 23-10-08 | 35 |
| 05 | Basic Course for Rover Scout Leaders | Sri. A.M. Shankar L.T. (R) | 14-10-08 To 23-10-08 | 16 |

Senior Leaders Sri. T.S. Lucas, L.T.(S) State Commissioner (S), Sri C. S. Reddy, L.T.(S) Former State Secratary, Sri. M.A. Chellaiah, Headquarters, Commissioner visited the camp and taught few skills to the campers. Miss. Suman Latha, Asst. Director, Southern Region also visited the camp and explained about P.M. Shield Competation.

## Valedictory Programme

Valedictory Function was held on 22-10-2008. Sri I. M. Vittala Murthy, I.A.S. Secretary to Govt. Dept. of Youth Services and Sports was the Chief Guest.

In his Address he said that Scout & Guide Movement should be spread to more schools. He Promised to release Rs. 3 crores additional grants by the end of March, 2009 for the Development Works of the campsite Sri Kondajji B. Shanmukhappa, State Chief Commissioner appealed for more support from the Government. Miss Ravi Wesley, State Commissioner (G) Sri R. Venkanna D.C.C Bellary, were present.

The Scouts & Guides of Rajasthan & Karnataka, part of Cultural Exchange Camp attended this programme. Officials of Rajasthan state were also present.

### Inter State Cultural Exchange Camp

This camp was held at Dr. Annie Besant Park, Doddaballapur, Bangalore from 20-10-2008 to 24-10-2008. Scouts & Guides from Rajasthan State participated in the camp along with their Unit Leaders. Scouts & Guides of Bidar Dist. from Karnataka State also participated in the camp along with their Unit Leaders.

There was an Exhibition of Food items prepared by Scouts & Guides of Both the States. They Exhibited the Culture & Traditions of their states and taught each other they all joined the valedictory function on 22-10-2008 along with the campers of State Level Trg. Courses. Sri M. Srinivas, Group Leader, 15th Kanteerava Scout Group was the Co-ordinator of the camp.

## Scouts / Guides participated in JOTA held SHQ

Over 150 Cubs, Bulbuls, Scouts and Guides, Unit Leaders participated in Jamboree - on - the Air held at State Headquarters, Bharat Scouts and Guides, Bangalore from 19th to 20th October, 2008.

They exchanged views with their counterparts throughout the World with the help of Ham Radio. This helped in building up world Brotherhood and Sisterhood. Bangalore Amature Radio Club setup the Ham Radio Station at the State Headquarters. Lion Ajay, Secretary BARC alongwith his team members helped in setting up the Ham Station and run it very successfully.

Sri Narayana Setty, State Organising Commissioner (S), Unit Leaders, Parents were present on the occasion.

# Gone Home



The Bharat Scouts and Guides, Karnataka record with deep regret the Sad demise of Sri R. Puttaraju, Group 'D' Employee Working at the Guide Wing Office, Bangalore. He Passed away on Tuesday, 21st October 2008 at KIMS Hospital, Bangalore

He leaves behind his Wife, Son and Daughter.

We Pray God Almighty to give necessary Courage and Strength to his Wife, Children and other Family members to bear this Irreparable Loss.

We, the Members and Employees of the Bharat Scouts and Guides, Karnataka Join them in Praying for the Departed Soul.

May His Soul Rest in Peace

***State Secretarty***

# ಜಿಲ್ಲಾ ವಾರ್ತೆ

## ದಾವಣಗೆರೆ ಜಿಲ್ಲೆ

ದಿನಾಂಕ 2-10-2008 ರಂದು ಮಹಾತ್ಮ ಗಾಂಧೀಜಿ ಜಯಂತಿಯ ಪ್ರಯುಕ್ತ ಸರ್ವಧರ್ಮ ಪ್ರಾರ್ಥನೆ ಹಮ್ಮಿಕೊಳ್ಳಲಾಗಿತ್ತು. ಶ್ರೀಜಗದ್ಗುರು ಮೃತ್ಯುಂಜಯ ಸ್ವಾಮಿಗಳು ಸಮಾರಂಭದ ಸಾನ್ನಿಧ್ಯ ವಹಿಸಿದ್ದರು. ವಿವಿಧ ಧರ್ಮ ಗ್ರಂಥಗಳ ಪಠಣವನ್ನು ಮಾಡಲಾಯಿತು. 500 ಕಬ್ಸ್, ಬುಲ್‌ಬುಲ್ಸ್ ಮತ್ತು ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಪಾಲ್ಗೊಂಡಿದ್ದರು.

ಸಾನ್ನಿಧ್ಯ ವಹಿಸಿದ್ದ ಸ್ವಾಮಿಗಳು ಆಶೀರ್ವಚನ ನೀಡುತ್ತಾ ಸರ್ವಧರ್ಮ ಪ್ರಾರ್ಥನೆ ಮೂಲಕ ಸಬರಮತಿ ಆಶ್ರಮವನ್ನು, ಭಾವೈಕ್ಯತೆಯನ್ನು ಎತ್ತಿ ತೋರುತ್ತಿದ್ದೀರಾ ಎಂದು ನುಡಿದರು. ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ಎ.ಪಿ. ಷಡಾಕ್ಷರಪ್ಪ ಸರ್ವರನ್ನು ಸ್ವಾಗತಿಸಿದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಶಂಕರ್‌ನಾಯ್ಕ ವಂದನೆ ಅರ್ಪಿಸಿದರು. ವೇದಿಕೆ ಮೇಲೆ ಎಲ್ಲಾ ಪದಾಧಿಕಾರಿಗಳೂ ಸ್ಕೌಟರ್ಸ್ ಮತ್ತು ಗೈಡರ್ಸ್‌ಗಳು ಉಪಸ್ಥಿತರಿದ್ದರು.

************

ದಿನಾಂಕ 26-8-2008 ರಿಂದ 28-8-2008 ರ ವರೆಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ವತಿಯಿಂದ ಶ್ರೀಬೀರೇಶ್ವರ ಕಲ್ಯಾಣ ಮಂಟಪ ದಲ್ಲಿ ಕಬ್ಸ್ ಮತ್ತು ಬುಲ್‌ಬುಲ್ಸ್ ಸಿಕ್ಸರ್ ಶಿಬಿರವನ್ನು ಆಯೋಜಿಸಲಾಗಿತ್ತು.

ಶಿಬಿರದಲ್ಲಿ ದಾವಣಗೆರೆ ಜಿಲ್ಲೆಯ ಗ್ರಾಮಾಂತರ ಪ್ರದೇಶಗಳಾದ ಚನ್ನಗಿರಿ, ಹರಪನಹಳ್ಳಿ, ಹೊನ್ನಾಳಿ, ಜಗಳೂರು, ತಾಲೂಕು ಗಳಿಂದ 160 ಕಬ್ಸ್ ಹಾಗೂ 100 ಬುಲ್‌ಬುಲ್ಸ್ ಭಾಗವಹಿಸಿದ್ದರು.

ಕಬ್ಸ್ ಶಿಬಿರದ ನಾಯಕಿಯಾಗಿ ಶ್ರೀಮತಿ ಶಾಂತಕುಮಾರಿ ಎಚ್.ಡಬ್ಲ್ಯೂ.ಬಿ. ಬುಲ್ ಬುಲ್ಸ್ ವಿಭಾಗದ ನಾಯಕಿಯಾಗಿ ಶ್ರೀಮತಿ ಎಸ್. ಸಿದ್ಧಮ್ಮ ಎ.ಎಲ್.ಟಿ. ಕಾರ್ಯನಿರ್ವಹಿಸಿದರು. ಮಿನಿ ಒಲಂಪಿಕ್ಸ್ ಆಯೋಜಿಸಲಾಗಿತ್ತು.

ಮುಕ್ತಾಯ ಸಮಾರಂಭಕ್ಕೆ ಶ್ರೀ ಕೆ.ಮಲ್ಲಪ್ಪ ಮಾಜಿ ಶಾಸಕರು ಮುಖ್ಯ ಅತಿಥಿಯಾಗಿ ಆಗಮಿಸಿದ್ದರು. ಜಿಲ್ಲಾ ಸಂಸ್ಥೆ ಅಧ್ಯಕ್ಷ, ಶ್ರೀ ಅಥಣಿ ಕೊಟ್ರೇಶ್ ಅಧ್ಯಕ್ಷತೆ ವಹಿಸಿದ್ದರು. ಶ್ರೀ ನಾರಾಯಣ ಶೆಟ್ಟಿ ರಾಜ್ಯ ಸಂಘಟನಾ ಆಯುಕ್ತರು ಶಿಬಿರಕ್ಕೆ ಭೇಟಿ ನೀಡಿದರು. 20ಕ್ಕೂ ಹೆಚ್ಚು ಕಬ್ ಮಾಸ್ಟರ್ಸ್, ಫ್ಲಾಕ್ ಲೀಡರ್ಸ್ ಹಾಗೂ ಎಲ್ಲಾ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಸಿಕ್ಸರ್ ಶಿಬಿರವನ್ನು ಯಶಸ್ವಿಗೊಳಿಸಲು ಸಹಕರಿಸಿದರು.

## ಹಾಸನ ಜಿಲ್ಲೆ

ಮಹಾತ್ಮಗಾಂಧಿ ಜಯಂತಿ ಹಾಗೂ ಲಾಲ್‌ಬಹದ್ದೂರ್ ಶಾಸ್ತ್ರೀ ಜಯಂತಿಯ ಆಚರಣೆ ಅಂಗವಾಗಿ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಹಾಗೂ ಜಿಲ್ಲಾ ಉಪ-ಕಾರಾಗೃಹದ ಸಹಯೋಗದೊಂದಿಗೆ ಹಾಸನ ನಗರದ ಜೈಲು ಆವರಣದಲ್ಲಿ "ಸರ್ವಧರ್ಮ ಪ್ರಾರ್ಥನೆ" ಹಾಗೂ ಮನಪರಿವರ್ತನಾ ಸಮಾರಂಭವನ್ನು ಅರ್ಥಪೂರ್ಣವಾಗಿ ಅಚರಿಸ ಲಾಯಿತು.

ಈ ಸಮಾರಂಭ ಅಧ್ಯಕ್ಷತೆಯನ್ನು ವಹಿಸಿ ಮಾತನಾಡಿದ. ಜಿಲ್ಲಾ ಮುಖ್ಯ ಆಯುಕ್ತ ಡಾ॥ ವೈ.ಎಸ್. ವೀರಭದ್ರಪ್ಪನವರು ಆಸೆ, ಮೋಸ,

ಅಸೂಯೆ, ದ್ವೇಷ, ಸಿಟ್ಟು, ಲೋಭ, ಮಧ, ಮಾತ್ಸರ್ಯ ಮಾನವನಲ್ಲಿ ಮನೆ ಮಾಡಿಕೊಂಡಿದ್ದು, ಇದು ಅರ್ಬುದ ರೋಗಕ್ಕಿಂತ ಹೆಚ್ಚಿನದು ಎಂದರು.

ಈ ಸಮಾರಂಭದಲ್ಲಿ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಪ್ರಸಿದ್ಧ ಸಾಹಿತಿಗಳು ಹಾಗೂ ವಕೀಲರಾದ ಶ್ರೀ ಜ.ಹೋ. ನಾರಾಯಣಸ್ವಾಮಿಯವರು ಮಾತನಾಡಿ ಮನುಕುಲ ಒಂದೆಂದು ನಂಬಿ, ಸರ್ವಧರ್ಮ ಸಮನ್ವಯಗಳ ನೆಲೆಯಲ್ಲಿ ವಿಶ್ವಕ್ಕೆ ಅಹಿಂಸೆಯನ್ನು ಸಾರಿದ ಗಾಂಧೀಜಿ ಒಬ್ಬ ಯುಗಪುರುಷರು ಎಂದರು.

ಮತ್ತೋರ್ವ ಅತಿಥಿ ಜಿಲ್ಲಾ ಹೋಂಗಾರ್ಡ್ಸ್ ಮಾಜಿ ಕಮಾಂಡೆಂಟ್ ಶ್ರೀ ಹೆಚ್.ಎಂ. ಶಿವಣ್ಣನವರು ಮಾತನಾಡಿ, ತಾನು ಜೈಲು ಸೇರಿದೆ ಎಂಬ ಕೀಳರಿಮೆ ಬೇಡ, ತಪ್ಪು ಮಾಡುವುದು ಮಾನವನ ಸಹಜ ಕ್ರಿಯೆ, ಆದರೆ ಅದನ್ನು ತಿದ್ದಿಕೊಂಡು ಬಾಳುವುದೇ ಸದ್ಧರ್ಮ. ದೇಶದ ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ನಾನೂ ಸಹ ಜೈಲು ಸೇರಿದ್ದರೂ ಚಿಂತೆ ಪಡಲಿಲ್ಲವೆಂದರು.

ಅಂತಿಮವಾಗಿ ಶ್ರೀ ವೆಂಕಟೇಶ್ವರ ಪ್ರೌಢಶಾಲೆ, ಸೇಂಟ್ ಫಿಲೋಮಿನಾ ಪ್ರೌಢಶಾಲೆ, ಶ್ರೀ ಅರವಿಂದ ಪ್ರೌಢಶಾಲೆ, ಕೆಂಚನಹಳ್ಳಿ ಸರ್ಕಾರಿ ಶಾಲೆ, ಸಂತೆಪೇಟೆ ಸರ್ಕಾರಿ ಪ್ರೌಢಶಾಲೆಯ ಸ್ಕೌಟ್ಸ್, ಗೈಡ್ಸ್ ವಿದ್ಯಾರ್ಥಿಗಳು ವಿವಿಧ ವರ್ಣರಂಜಿತ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನೀಡಿ ಜೈಲು ವಾಸಿಗಳ ಮನಸ್ಸನ್ನು ರಂಜಿಸಿದರು. ಸ್ಕೌಟ್ಸ್ ಸಂಸ್ಥೆಯ ವತಿಯಿಂದ 380ಕ್ಕೂ ಹೆಚ್ಚು ಜೈಲು ವಾಸಿಗಳಿಗೆ ಸಿಹಿ ಹಂಚಲಾಯಿತು.

## ಬಳ್ಳಾರಿ ಜಿಲ್ಲೆ

ದಿನಾಂಕ 28-9-2008 ರಂದು ಬಳ್ಳಾರಿ ಜಿಲ್ಲಾ ಮುಖ್ಯ ಕಾರ್ಯಾಲಯದಲ್ಲಿ ಬಳ್ಳಾರಿ ಜಿಲ್ಲೆಯ ಮಾನ್ಯ ಮಂತ್ರಿಗಳಿಗೆ ಹಾಗೂ ಬಳ್ಳಾರಿ ನಗರ ಶಾಸಕರಿಗೆ ಸನ್ಮಾನ ಸಮಾರಂಭ ಏರ್ಪಡಿಸಲಾಗಿತ್ತು. ಮಾನ್ಯಶ್ರೀ ಬಿ. ಶ್ರೀರಾಮುಲು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು ಹಾಗೂ ಮಾನ್ಯ ಶ್ರೀ ಜಿ. ಸೋಮಶೇಖರ ರೆಡ್ಡಿ, ಶಾಸಕರು, ಬಳ್ಳಾರಿ ಜಿಲ್ಲೆ, ಇವರು ಹಾಜರಿದ್ದರು. ಇವರಿಗೆ ಬಳ್ಳಾರಿ ಜಿಲ್ಲಾ ಸಂಸ್ಥೆವತಿಯಿಂದ ಸನ್ಮಾನಿಸಲಾಯಿತು. ಕೂಡ್ಲಿಗಿ, ಬಳ್ಳಾರಿ, ಹೊಸಪೇಟೆ ಹಗರಿಬೊಮ್ಮನಹಳ್ಳಿ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಗಳು ಪುಷ್ಪಹಾರವನ್ನು ಕೊಟ್ಟು ಸನ್ಮಾನಿಸಿದರು. ಅಂದು ಮಾನ್ಯ ಬಿ. ಶ್ರೀರಾಮುಲು ಹಾಗೂ ಶ್ರೀ ಜಿ. ಸೋಮಶೇಖರ ರೆಡ್ಡಿಯವರು ರಾಜ್ಯ ಪುರಸ್ಕಾರ ಸ್ಕೌಟ್ ಗೈಡ್‌ಗಳಿಗೆ ಪ್ರಮಾಣಪತ್ರ ವಿತರಿಸಿದರು. ಅಲ್ಲದೆ ಜುಲೈ ತಿಂಗಳಲ್ಲಿ ತರಬೇತಿ ಹೊಂದಿದ ಸ್ಕೌಟ್ ಮಾಸ್ಟರ್ ಹಾಗೂ ಗೈಡ್ ಕ್ಯಾಪ್ಟನ್‌ಗಳಿಗೆ ಪ್ರಮಾಣಪತ್ರ ವಿತರಿಸಿದರು. ಶ್ರೀ ಆರ್. ವೆಂಕಣ್ಣ ಜಿಲ್ಲಾ ಮುಖ್ಯ ಆಯುಕ್ತರು ಜಿಲ್ಲಾ ಸ್ಕೌಟ್ ಗೈಡ್ ಅಭಿವೃದ್ಧಿಗೆ ಬೇಕಾದ ನೆರವಿಗಾಗಿ ಮನವಿ ಪತ್ರವನ್ನು ಮಾನ್ಯ ಸಚಿವರು ಹಾಗೂ ಶಾಸಕರಿಗೆ ಸಲ್ಲಿಸಿ ಜಿಲ್ಲೆಯ ಸದ್ಯ ಈಗಿರುವ ಸ್ಕೌಟ್ ಗೈಡ್ ಭವನದ 2ನೇ ಅಂತಸ್ತಿಗೆ ಬೇಕಾಗುವ ಹಣವನ್ನು ಶಾಸಕರನಿಧಿಯಿಂದ ಕೊಡಬೇಕೆಂದು ಹಾಗೂ ಪ್ರತಿವರ್ಷ ಸ್ಕೌಟ್ ಗೈಡ್ ಚಟುವಟಿಕೆಗಳಿಗೆ ಸರಕಾರದಿಂದ ರೂ. 5 ಲಕ್ಷ ರೂಪಾಯಿಗಳನ್ನು ಕೊಡಿಸಬೇಕೆಂದು ವಿನಂತಿಸಿದರು. ಸರಕಾರದಿಂದ ಪ್ರತಿ ವರ್ಷ ಐದು ಲಕ್ಷ ರೂಪಾಯಿಗಳನ್ನು ಸ್ಕೌಟ್ ಗೈಡ್ ಚಟುವಟಿಕೆಗಳಿಗೆ ಮಾನ್ಯ ಮುಖ್ಯ ಮಂತ್ರಿಗಳ ಜೊತೆ ಚರ್ಚಿಸಿ ಬಿಡುಗಡೆ ಮಾಡಿಸುವುದಾಗಿ ಮಾನ್ಯ ಮಂತ್ರಿಗಳು ತಿಳಿಸಿದರು. ಜಿಲ್ಲೆಯ ಸ್ಕೌಟ್ ಗೈಡ್ ಚಟುವಟಿಕೆ ದಿನೆ ದಿನೇ ಅಭಿವೃದ್ಧಿ ಹೊಂದುವುದನ್ನು ಕಂಡು ಮಾನ್ಯ ಮಂತ್ರಿಗಳು ಹಾಗೂ ಶಾಸಕರು ಸಂತಸ ವ್ಯಕ್ತಪಡಿಸಿದರು. ಅಲ್ಲದೆ ಅವರ ಬಾಲ್ಯ ಜೀವನದ ಸ್ಕೌಟಿಂಗ್ ಅನುಭವನ ಮಾತುಗಳನ್ನು ಮಕ್ಕಳಿಗೆ ತಿಳಿಸಿದರು. ಸಭೆಯಲ್ಲಿ 350 ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಒಂದು ನೂರು ಸ್ಕೌಟ್ ಮಾಸ್ಟರ್ಸ್, ಗೈಡ್ ಕ್ಯಾಪ್ಟನ್‌ಗಳು

ಹಾಗೂ ಪಾಲಕರು, ಪೋಷಕರು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿದ್ದರು. ಅಲ್ಲದೆ ಜಿಲ್ಲೆಯ ಎಲ್ಲಾ ಪದಾಧಿಕಾರಿಗಳು ತಾಲೂಕಿನ ಎಲ್ಲಾ ಪದಾಧಿಕಾರಿಗಳು ಭಾಗವಹಿಸಿದ್ದರು. ಶ್ರೀ ಟೇಕೂರ್ ರಾಮನಾಥ ಜಿಲ್ಲಾ ಆಯುಕ್ತ ಸ್ವಾಗತಿಸಿದರು. ಶ್ರೀ ಎ.ಎಂ. ಶಖೀಬ್, ಜಿಲ್ಲಾ ಕಾರ್ಯದರ್ಶಿ ವಂದನೆ ಸಲ್ಲಿಸಿದರು. ಬಸವರಾಜೇಶ್ವರಿ ಶಾಲೆಯ ಗೈಡ್‌ಗಳು ಮನರಂಜನಾ ಕಾರ್ಯಕ್ರಮ ನೀಡಿದರು.

*******************************

**ವಿದ್ಯಾರ್ಥಿಗಳು ಉತ್ತಮ ನಾಯಕತ್ವ ಗುಣ ಬೆಳಸಿಕೊಳ್ಳಬೇಕು.**



**ಹೊಸಪೇಟೆ :** ವಿದ್ಯಾರ್ಥಿಗಳು ತಮ್ಮ ವಿದ್ಯಾಭ್ಯಾಸದ ಜೊತೆಯಲ್ಲೇ ಉತ್ತಮ ನಾಯಕತ್ವ ಹಾಗೂ ಉತ್ತಮ ಭವಿಷ್ಯ ರೂಪಿಸಿಕೊಳ್ಳಲು ಮುಂದಾಗಬೇಕೆಂದು ಇಲ್ಲಿನ ಲಿಟ್ಲ್ ಫ್ಲವರ್ ಶಾಲೆಯ ಶಿಕ್ಷಕ ರಾಕೇಶ್ ರಂಜಿತ್ ಕುಮಾರ್ ಹೇಳಿದರು.

ತಾಲೂಕಿನ ಕಮಲಾಪುರ ಪಟ್ಟಣದ ಸಮೀಪದಲ್ಲಿರುವ ಹಂಬಿ ಪವರ್ ಕ್ಯಾಂಪ್‌ನಲ್ಲಿ ಇತ್ತೀಚೆಗೆ ಹೊಸಪೇಟೆ ನಗರದ ಲಿಟ್ಲ್ ಫ್ಲವರ್ ಶಲೆಯ ಸ್ಕೌಟ್ ಮತ್ತು ಗೈಡ್ ವಿದ್ಯಾರ್ಥಿಗಳಿಗಾಗಿ ನಾಲ್ಕು ದಿನಗಳ ಕಾಲ ನಡೆದ ಶಿಬಿರದಲ್ಲಿ ಭಾಗವಹಿಸಿ ಅವರು ಮಾತನಾಡುತ್ತಿದ್ದರು.

ಶಿಬಿರದಲ್ಲಿ ವಿದ್ಯಾರ್ಥಿಗಳು ಕಾವಲು ಗೋಪುರ, ಟೆಂಪರರಿ ವಾಚ್ ಟವರ್, ಮಂಕಿಬ್ರಿಡ್ಜ್, ವಾಶ ಬೇಸಿನ್, ಟ್ರೈಪ್ಯಾಡ್, ಗೇಟ್ ಮುಂತಾದವುಗಳನ್ನು ರಚಿಸಿದರು.

ಹೊಸಪೇಟೆ ನಗರದ ವಿಜಯಶ್ರೀ ಕನ್‌ಸ್ಟ್ರಕ್ಷನ್‌ನ ಶ್ರೀ ರಾಜೂ ಭೂರಟ್ ಶಿಬಿರದಲ್ಲಿ ಭಾಗವಹಿಸಿದ ಸ್ಕೌಟ್ ಮತ್ತು ಗೈಡ್ಸ್ ವಿದ್ಯಾರ್ಥಿಗಳಿಗೆ ಪ್ರಮಾಣ ಪತ್ರಗಳನ್ನು ವಿತರಿಸಿದರು.

ಶಿಬಿರದಲ್ಲಿ ಶಾಲಾ ಮುಖ್ಯ ಗುರುಗಳು, ಶಾಲಾ ಶಿಕ್ಷಕರು ಹಾಗೂ ಪಾಲಕರು ಸೇರಿದಂತೆ ಇತರರು ಭಾಗವಹಿಸಿದ್ದರು.

## ಕೋಲಾರ ಜಿಲ್ಲೆ

ದಿನಾಂಕ 20-9-2008 ರಂದು ಚೆನ್ನಯ್ಯ ರಂಗಮಂದಿರದಲ್ಲಿ ಜಿಲ್ಲಾ ಮಟ್ಟದ ಸ್ಕೌಟರ್ಸ್ ಮತ್ತು ಗೈಡರ್ಸ್‌ಗಳ ಸಮಾವೇಶ ಜರುಗಿತು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ಅವರು ಮುಖ್ಯ ಅತಿಥಿಗಳಾಗಿ ಆಗಮಿಸಿ ಸಮಾವೇಶವನ್ನು ಉದ್ಘಾಟಿಸಿದರು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ.ವಿ. ಶಂಕರಪ್ಪನವರು ಅಧ್ಯಕ್ಷತೆ ವಹಿಸಿದ್ದರು ಹಾಗೂ ಜಿಲ್ಲಾ ಸಂಸ್ಥೆ ಪದಾದಿಕಾರಿಗಳು ಉಪಸ್ಥಿತರಿದ್ದರು. ಕೋಲಾರ ಜಿಲ್ಲೆಯ 120 ಸ್ಕೌಟರ್ಸ್ ಮತ್ತು ಗೈಡರ್ಸ್‌ಗಳು ಸಮಾವೇಶದಲ್ಲಿ ಭಾಗವಹಿಸಿದ್ದರು.

ಶ್ರೀ ಚೆನ್ನಸ್ವಾಮಿ ರೆಡ್ಡಿ, ಶ್ರೀ ನಾರಾಯಣ ಶೆಟ್ಟಿ, ಶ್ರೀಮತಿ ಕೆ.ಕೆ. ಲೀಲಾ, ಶ್ರೀ ಎಂ.ವಿ. ಜನಾರ್ಧನ್ ಶ್ರೀ ಬಾಲಕೃಷ್ಣರೆಡ್ಡಿ ಶ್ರೀ ಮುನಿ ನಾರಾಯಣಪ್ಪ, ಶ್ರೀ ನಾರಾಯಣಸ್ವಾಮಿ ಇವರುಗಳು ಸಂಪನ್ಮೂಲ ವ್ಯಕ್ತಿಗಳಾಗಿ ವಿವಿಧ ವಿಷಯಗಳನ್ನು ಬೋಧಿಸಿದರು. ಇದೇ ಸಂದರ್ಭದಲ್ಲಿ

ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರು ಉತ್ತಮವಾಗಿ ಚಟುವಟಿಕೆಗಳನ್ನು ಸಂಘಟಿಸಬೇಕು ತರಬೇತಿ ಶಿಬಿರಗಳನ್ನು ನಡೆಸಬೇಕು ಎಂದು ಮನವಿ ಮಾಡಿದರು.

## ದಕ್ಷಿಣ ಕನ್ನಡ ಜಿಲ್ಲೆ

### ಜಿಲ್ಲಾ ಮಟ್ಟದ ಸ್ಕೌಟರ್ಸ್ -ಗೈಡರ್ಸ್ ಸಮಾವೇಶ

ದಿನಾಂಕ 20-09-2008 ರಂದು ಪಮ್ಮಿಕೊಂಡ ಜಿಲ್ಲಾಮಟ್ಟದ ಸ್ಕೌಟರ್ ಗೈಡರ್ ಸಮಾವೇಶವನ್ನು ಜಿಲ್ಲಾ ಸಂಸ್ಥೆಯ "ಪಿಲಿಕುಳ ತರಬೇತಿ ಕೇಂದ್ರ" ದಲ್ಲಿ ಸಂತ ಅಲೋಶಿಯಸ್ ವಿದ್ಯಾ ಸಂಸ್ಥೆಗಳ [ರೆಕ್ಟರ್] ಮುಖ್ಯಸ್ಥ ರೆವರೆಂಡ್ ಫಾದರ್ ಫ್ರಾನ್ಸಿಸ್ ಸೆರಾವೋ ಅವರು ಉದ್ಘಾಟಿಸಿದರು.

ಆರಂಭದಲ್ಲಿ ಜಿಲ್ಲಾ ಪ್ರಧಾನ ಆಯುಕ್ತ ಶ್ರೀ ಐ.ಎ. ಕೈರನ್ನ ಎಲ್ಲರನ್ನು ಸ್ವಾಗತಿಸಿದರು, ಸ್ಕೌಟ್ಸ್ ಆಯುಕ್ತರಾದ ಶ್ರೀ ಎಸ್.ಜಿ. ಮೋಹನ್ ಪ್ರಾಸ್ತಾವಿಕ ಭಾಷಣ ಮಾಡಿದರು. ಇದೇ ಸಂದರ್ಭದಲ್ಲಿ ರಾಷ್ಟ್ರಮಟ್ಟದಲ್ಲಿ ನಡೆದ ಚಿತ್ರ ಕಲಾ ಸ್ಪರ್ಧೆಯಲ್ಲಿ ರಾಜ್ಯದಿಂದ ಆಯ್ಕೆಯಾದ ಗೈಡ್ಸ್‌ಗಳನ್ನು ಬಹುಮಾನ ನೀಡಿ ಪುರಸರಿಸಲಾಯಿತು.

ಇದೇ ಸಂದರ್ಭದಲ್ಲಿ ಶ್ರೀ ವಸಂತ, ಶ್ರೀ ವೀರ ಫರ್ನ್ಯಾಂಡಿಸ್, ಸಿಸ್ಟರ್ ಲೋರಿನಾ ಅವರಿಗೆ ಶ್ರೀ ಹರ್ಷಕುಮಾರ್, ಶ್ರೀ ಪ್ರತಿಮ್ ಕುಮಾರ್, ಶ್ರೀಮತಿ ಸುಫಲಾ, ಶ್ರೀಮತಿ ಸುಗುಣಾಂಬ, ಮೆಡಲ್ ಆಫ್ ಮೆರಿಟ್ ಪ್ರಶಸ್ತಿ ನೀಡಿ ಪುರಸ್ಕರಿಸಲಾಯಿತು.

ಕಾರ್ಯಕ್ರಮದ ಕೊನೆಗೆ ಜಿಲ್ಲಾ ಕಾರ್ಯದರ್ಶಿ ಶ್ರೀ ಸಂತೋಷ್ ಕುಮಾರ್ ಕದ್ರಿ ಧನ್ಯವಾದ ನೀಡಿದರು. ವೇದಿಕೆಯಲ್ಲಿ ಜಿಲ್ಲಾ ಆಯುಕ್ತೆ [ಗೈಡ್ಸ್], ಐರಿನ್ ಡಿಕುನ್ನ, ಜಿಲ್ಲಾ ಖಜಾಂಚಿ ಶ್ರೀ ರವೀಂದ್ರನಾಥ್ ಇವರು ಉಪಸ್ಥಿತರಿದ್ದರು. ಶ್ರೀ ಎಂ.ಜಿ. ಕಜೆ ಕಾರ್ಯಕ್ರಮ ನಿರ್ವಹಿಸಿದರು. ಸಮಾರಂಭದ ಬಳಿಕ ಸ್ಕೌಟರ್, ಗೈಡರ್ ಸಮಾವೇಶದ ಚಟುವಟಿಕೆಗಳನ್ನು ಶ್ರೀ ಜಿ.ಕೆ. ಗೋಪಾಲಕೃಷ್ಣ ಭಟ್ ಅವರು ನಡೆಸಿಕೊಟ್ಟರು. ಸಮಾವೇಶದಲ್ಲಿ ಜಿಲ್ಲೆಯ ಬೇರೆ ಬೇರೆ ತಾಲೂಕುಗಳಿಂದ ಸ್ಕೌಟರ್ ಗೈಡರ್‌ಗಳು ಭಾಗವಹಿಸಿದ್ದರು.

### ಸಸಿನೆಡುವ ಕಾರ್ಯಕ್ರಮ:

ಜಿಲ್ಲಾ ಸಂಸ್ಥೆ ಹಾಗೂ ಮಂಗಳೂರು ನಗರ ಸ್ಥಳೀಯ ಸಂಸ್ಥೆ ವತಿಯಿಂದ ಸಸಿನೆಡುವ ಕಾರ್ಯಕ್ರಮವನ್ನು ಕದಿಹಿಲ್‌ನಿಂದ ಮೇರಿಹಿಲ್ ವರೆಗೆ ಮಹಾನಗರ ಪಾಲಿಕೆಯ ಆಯುಕ್ತರಾದ ಶ್ರೀ ಸಮೀರ್ ಶುಕ್ಲ ಇವರು ಸ್ಕೌಟ್ಸ್-ಗೈಡ್ಸ್‌ಗಳಿಗೆ ಸಸಿನೀಡಿ ಗಿಡನೆಡುವ ಮೂಲಕ ಉದ್ಘಾಟಿಸಿದರು. ಜಿಲ್ಲಾ ಪದಾಧಿಕಾರಿಗಳು ಹಾಗೂ ಮಂಗಳೂರು ಮಹಾನಗರ ಪಾಲಿಕೆಯ ಅಧಿಕಾರಿಗಳು ಭಾಗವಹಿಸಿದ್ದರು.

### ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬನ್ನಿ ತರಬೇತಿ ಶಿಬಿರ:

ದಿನಾಂಕ : 18-9-08 ರಿಂದ 20-9-2008 ರ ವರೆಗೆ ದಕ್ಷಿಣ ಕನ್ನಡ ಜಿಲ್ಲಾ ವಿವಿಧ ಶಾಲಾ ಶಿಕ್ಷಕಿಯರಿಗೆ ಬನ್ನಿ ತರಬೇತಿಯು ಬೆಂಗಳೂರು ರಾಜ್ಯ ಸಂಸ್ಥೆಯ ಸ್ಥಾನಿಕ ಆಯುಕ್ತೆ ಕು. ಪಿ. ಸರೋಜ ಅವರ ನಾಯಕತ್ವದಲ್ಲಿ ನಡೆಯಿತು.

### ಪರಿಸರ ಸ್ವಚ್ಛತಾ ಕಾರ್ಯಕ್ರಮ:

ಉಳ್ಳಾಲ ಸ್ಥಳೀಯ ಸಂಸ್ಥೆ ಮತ್ತು ಬಿ.ಇ.ಎಂ. ವತಿಯಿಂದ ಗಿಡನೆಡುವ ಕಾರ್ಯಕ್ರಮ ಹಾಗೂ ಪರಿಸರ ಸ್ವಚ್ಛತಾ ಕಾರ್ಯಕ್ರಮ ದಿನಾಂಕ 7-10-2008 ರಂದು ಬಿ.ಇ.ಎಂ.ಪ್ರೌಢ ಶಾಲಾ ಮುಖ್ಯೋಪಾದ್ಯಾಯಿನಿ

ಶ್ರೀಮತಿ ಬಿ. ಪದ್ಮಾವತಿಯುವರ ಅಧ್ಯಕ್ಷತೆಯಲ್ಲಿ ನಡೆಯಿತು. ಉಳ್ಳಾಲ ಆರಕ್ಷಕ ಠಾಣಾ ಎ.ಎಸ್.ಐ. ಶ್ರೀಮತಿ ನಾಗವೇಣಿಯವರು ಉದ್ಘಾಟಿಸಿದರು. ಮುಖ್ಯ ಅತಿಥಿಗಳಾಗಿ ಶ್ರೀ ಎನ್.ಜಿ. ಮೋಹನ್, ಜಿಲ್ಲಾ ಸ್ಕೌಟ್ ಆಯುಕ್ತರು, ಉಳ್ಳಾಲ ಸ್ಥಳೀಯ ಸಂಸ್ಥೆಯ ಅಧ್ಯಕ್ಷರು ಭಾಗವಹಿಸಿದ್ದರು. ಕಾರ್ಯದರ್ಶಿ ಶ್ರೀಮತಿ ಜಯವಂತಿ ಸೋನ್ಸ್ ಕಾರ್ಯಕ್ರಮವನ್ನು ಸಂಯೋಜಿಸಿದರು. ಗೈಡ್ ಕರಿಶ್ಮಾ ಸ್ವಾಗತಿಸಿದರು, ನೀನಾಕುಮಾರಿ ವಂದಿಸಿದರು, ಗೀತಾ ಸಲ್ಡಾನ ಅವರು ಕಾರ್ಯಕ್ರಮ ನಿರ್ವಹಿಸಿದರು. ವಿವಿಧ ಶಾಲೆಗಳಿಂದ 300 ಸ್ಕೌಟರ್ಸ್, ಗೈಡರ್ಸ್‌ಗಳು ಭಾಗವಹಿಸಿದ್ದರು. ಉಳ್ಳಾಲ ನಗರ ಪಂಚಾಯಿತಿ ಸ್ಕೌಟರ್ಸ್, ಗೈಡರ್ಸ್‌ಗೆ ಪಾನೀಯದ ವ್ಯವಸ್ಥೆ ಆಯೋಜಿಸಿದರು.

## ಉತ್ತರ ಕನ್ನಡ ಜಿಲ್ಲೆ

### ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಂದ ಗುರುವಂದನಾ ಕಾರ್ಯಕ್ರಮ

ಸೆಪ್ಟಂಬರ್ 5ರಂದು ಮಾರ್ಥೋಮಾ ಶಾಲೆಯ ಸ್ಕೌಟ್ಸ್ ಗೈಡ್ಸ್, ಕಬ್ಸ್, ಬುಲ್ ಬುಲ್‌ಗಳು ಶಾಲೆಯಲ್ಲಿ ಗುರುವಂದನಾ ಕಾರ್ಯಕ್ರಮವನ್ನು ಏರ್ಪಡಿಸಿದ್ದರು. ಈ ಕಾರ್ಯಕ್ರಮವು ಪ್ರಾರ್ಥನೆಯೊಂದಿಗೆ ಆರಂಭ ಗೊಂಡಿತು. ಗೈಡ್ ಪೃಥ್ವಿ, ಸ್ಕೌಟ್ ವಿಕಾಸ್ ವಿ.ಬಿ. ಇವರು ಡಾಕ್ಟರ್ ರಾಧಾಕೃಷ್ಣನ್ ರವರ ಆದರ್ಶವನ್ನು ಪರಿಪಾಲಿಸುತ್ತೇವೆಂದು ಪ್ರತಿಜ್ಞೆಗೈದರು. ಈ ಕಾರ್ಯಕ್ರಮದಲ್ಲಿ ಜಿಲ್ಲೆಯಲ್ಲಿಯ ಹಿರಿಯ ಸ್ಕೌಟ್ ಮಾಸ್ಟರಾದ ಸೇಂಟ್ ಥಾಮಸ್ ಶಾಲೆಯ ಹಿಂದಿನ ಪ್ರಾಂಶುಪಾಲರಾದ ಹಾಗೂ ನಮ್ಮ ಹೊನ್ನಾವರ ಸ್ಥಳೀಯು ಸಂಸ್ಥೆಯು ಗೌರವ ಅಧ್ಯಕ್ಷರಾದ ಶ್ರೀ ಜೆ. ಅಬ್ರಹಾಂ ರವರಿಗೆ ಕಬ್ ಡೊಮಿನಿಕ್ ಫರ್ನಾಂಡೀಸ್ ಹೂ ಗುಚ್ಛವನ್ನು ನೀಡಿದನು. ಗುರುವಂದನೆ ಮಾಡಿದರು. ಹಾಗೆಯೇ ಶಾಲೆಯ ಪ್ರಾಂಶುಪಾಲರಾದ ಫಾ॥ ಥೋಮಸ್ ಮೆಥ್ಯು, ಮುಖ್ಯ ಅಧ್ಯಾಪಕಿಯರಾದ ಶ್ರೀಮತಿ ರ್‍ಯಾಚಲ್ ಥೋಮಸ್ ಹಾಗೂ ಎಲ್ಲಾ ಗುರುಗಳಿಗೆ ಪುಷ್ಪಗುಚ್ಛ ನೀಡಿ ಗೌರವಿಸಲಾಯಿತು.

ಈ ಕಾರ್ಯಕ್ರಮದಲ್ಲಿ ಶ್ರೀ ಬಿ.ಡಿ. ಫರ್ನಾಂಡೀಸ್ ರವರು ಮುಖ್ಯ ಅತಿಥಿಗಳಾಗಿ ಬಂದಿದ್ದರು. ಸ್ಕೌಟ್ ಮಾಸ್ಟರ್ ನರೇಶ್‌ನಾಯ್ಕ ಉಪಸ್ಥಿತರಿದ್ದರು. ಸ್ಕೌಟ್ ಮಂಜುನಾಥ್ ಸ್ವಾಗತಿಸಿದರೆ, ಗೈಡ್ ಶೋಭಾ ವಂದಿಸಿದರು.

## ಚಿತ್ರದುರ್ಗ ಜಿಲ್ಲೆ

### ಶಿಕ್ಷಣಾಧಿಕಾರಿಗಳಿಗೆ ಮಾಹಿತಿ ಶಿಬಿರ

ದಿನಾಂಕ 23-09-2008 ರಂದು ಗುರುಭವನದ ಸಭಾಂಗಣದಲ್ಲಿ ಚಿತ್ರದುರ್ಗ ಜಿಲ್ಲೆಯ ಶಿಕ್ಷಣ ಇಲಾಖೆಯ ಕ್ಷೇತ್ರ ಶಿಕ್ಷಣಾಧಿಕಾರಿಗಳು, ವಿದ್ಯಾಧಿಕಾರಿಗಳು, ಕ್ಷೇತ್ರ ಸಮನ್ವಯ ಅಧಿಕಾರಿಗಳು, ಕ್ಲಸ್ಟರ್ ಸಹಾಯಕ ವಿದ್ಯಾಧಿಕಾರಿಗಳು, ದೈಹಿಕ ಶಿಕ್ಷಣ ಅಧೀಕ್ಷಕರು, ದೈಹಿಕ ಶಿಕ್ಷಣ ವಿಷಯ ಪರಿವೀಕ್ಷಕರು, ಜಿಲ್ಲಾ ಸ್ಥಾನಿಕ ಆಯುಕ್ತರು ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳು, ಹಾಗೂ ಜಿಲಾ ಸಹಾಯಕ ಆಯುಕ್ತರುಗಳಿಗೆ ಒಂದು ದಿನದ ಸ್ಕೌಟಿಂಗ್ ಗೈಡಿಂಗ್ ಬಗ್ಗೆ ಮಾಹಿತಿ ಶಿಬಿರವನ್ನು ಏರ್ಪಡಿಸಲಾಗಿತ್ತು. ಶ್ರೀ ಎಂ.ಎನ್. ರಮೇಶ್, ವಿದ್ಯಾಧಿಕಾರಿಗಳು, ಚಿತ್ರದುರ್ಗ ಇವರು ಅಧ್ಯಕ್ಷತೆ ವಹಿಸಿದ್ದರು. ಶ್ರೀ ಎಂ.ಆರ್. ನಾರಾಯಣಪ್ಪ ಇವರು ಎಲ್ಲರನ್ನೂ ಸ್ವಾಗತಿಸಿದರು. ಕೇಂದ್ರ ಸ್ಥಾನಿಕ ಆಯುಕ್ತರಾದ ಶ್ರೀಮಹಮದ್ ವಾಸಿಲ್‌ರವರು ಹಾಗೂ ರಾಜ್ಯ ಸಂಘಟನಾ ಆಯುಕ್ತರಾದ ಶ್ರೀ ನಾರಾಯಣ ಶೆಟ್ಟಿಯವರು ಸಂಪನ್ಮೂಲ ವ್ಯಕ್ತಿಗಳಾಗಿ ಆಗಮಿಸಿ ಸ್ಕೌಟಿಂಗ್ ಮತ್ತು ಗೈಡಿಂಗ್ ಬಗ್ಗೆ ಮಾಹಿತಿ ನೀಡಿದರು. ಗೈಡ್ಸ್‌ನ ಸಹಕಾರ್ಯದರ್ಶಿಯುವರಾದ ಶ್ರೀಮತಿ ನಾಗರತ್ನ ತಿಪ್ಪೇಸ್ವಾಮಿಯುವರು ಉಪಸ್ಥಿತರಿದ್ದರು.

## ಕೊಪ್ಪಳ ಜಿಲ್ಲೆ

ಕೊಪ್ಪಳ ಜಿಲ್ಲೆಯ 2 ತಾಲ್ಲೂಕಿನಲ್ಲಿ ಸ್ಕೌಟರ್ಸ್ ಗೈಡರ್ಸ್ ಸಮಾವೇಶಗಳನ್ನು ಮಾಡಲಾಯಿತು. ಯಲಬುರ್ಗ ಸ್ಥಳೀಯ ಸಂಸ್ಥೆಯಲ್ಲಿ ತಾಲೂಕು ಸಮಾವೇಶ ದಿನಾಂಕ : 04-10-08 ರಂದು ನಡಸಲಾಯಿತು.

ಈ ಸಮಾವೇಶದಲ್ಲಿ ಅಧ್ಯಕ್ಷರಾಗಿ ಶ್ರೀಯುತ ಯಲ್ಲಪ್ಪ, ಪ್ರಾಂಶುಪಾಲರು, ಉದ್ಘಾಟಕರಾಗಿ ಮಾನ್ಯ ಕ್ಷೇತ್ರ ಶಿಕ್ಷಣಾಧಿಕಾರಿಗಳು ಆರ್.ಜಿ. ಮಜರ ಹುಸೇನ್ ಭಾಗವಹಿಸಿದ್ದರು. ಶ್ರೀಯುತ ಎ. ಯರ್ರೆಣ್ಣಿ, ಜಿಲ್ಲಾ ಸಂಘಟನಾ ಆಯುಕ್ತರು ಕೊಪ್ಪಳ ಇವರು ಪ್ರಾಸ್ತಾವಿಕ ನುಡಿಗಳನ್ನು ಹೇಳಿದರು. ಮುಖ್ಯ ಅತಿಥಿಗಳಾಗಿ ಶ್ರೀಮತಿ ಸಿದ್ಧಮ್ಮ ಮಾಲಿಪಾಟೀಲ್ ಸಮನ್ವಯ ಅಧಿಕಾರಿಗಳು, ಶ್ರೀಯುತ ಮರ್ದಾನ್ ಸಾಬ್ ಕೊತ್ವಾಲ್ ರಾಜ್ಯ ಪ್ರಶಸ್ತಿ ವಿಜೇತರು, ಶ್ರೀಯುತ ದೇವಪ್ಪ ಸಿ.ಆರ್.ಸಿ. ಸಂಯೋಜಕರು, ಯಲಬುರ್ಗ, ಶ್ರೀಯುತ ಶರಣಪ್ಪ ಜತ್ತಿ ಕಾರ್ಯದರ್ಶಿಗಳು ಸ್ಥಳೀಯ ಸಂಸ್ಥೆ ಯಲಬುರ್ಗ, ಶ್ರೀಮತಿ ಚಂದ್ರಮ್ಮ, ಗೈಡ್ ಕ್ಯಾಪ್ಟನ್, ರಾಜ್ಯ ಜಿಲ್ಲಾ ಗೈಡ್ ಪ್ರತಿನಿಧಿ ಶ್ರೀಕಾಂತ್ ಮಾಸಗಟ್ಟಿಯವರು ಉಪಸ್ಥಿತರಿದ್ದರು. 40 ಸ್ಕೌಟರ್ಸ್, 4 ಗೈಡರ್ಸ್ ಹಾಗೂ 30 ಸ್ಕೌಟ್ಸ್, 30 ಗೈಡ್ಸ್, ಭಾಗವಹಿಸಿದರು.

## ಬೆಂಗಳೂರು ದಕ್ಷಿಣ ಜಿಲ್ಲೆ

### ಭಗತ್‌ಸಿಂಗ್ ಜನ್ಮ ದಿನಾಚರಣೆ ಪ್ರಯುಕ್ತ ನೇತ್ರದಾನ ಶಿಬಿರ

ಆನೇಕಲ್ ಭಗತ್‌ಸಿಂಗ್ ಓಪನ್ ರೋವರ್ ತಂಡದ ಆಶ್ರಯದಲ್ಲಿ ದಿನಾಂಕ 27-09-2008 ರಂದು ದೇಶಭಕ್ತ ಭಗತ್‌ಸಿಂಗ್ ರವರ 101ನೇ ಜನ್ಮ ದಿನಾಚರಣೆ ಪ್ರಯುಕ್ತ ಪಟ್ಟಣದ ಸ್ವರ್ಣ ಮಹೋತ್ಸವ ಭವನದಲ್ಲಿ ಬೃಹತ್ ನೇತ್ರದಾನ ಶಿಬಿರವನ್ನು ಆಯೋಜಿಲಾಗಿತ್ತು.

ಇದೇ ಸಂದರ್ಭದಲ್ಲಿ ಭಗತ್‌ಸಿಂಗ್ ಮುಕ್ತ ರೋವರ್ ತಂಡ ಹಾಗೂ ರಾಣಿ ಚೆನ್ನಮ್ಮ ರೇಂಜರ್ ತಂಡಗಳ ಸುಮಾರು 60 ಸದಸ್ಯರು ಸೇರಿದಂತೆ ಒಟ್ಟು 600ಕ್ಕೂ ಹೆಚ್ಚು ಮಂದಿ ತಮ್ಮ ನೇತ್ರಗಳನ್ನು ನಾರಾಯಣ ನೇತ್ರಾಲಯದ ನೇತ್ರ ಭಂಡಾರಕ್ಕೆ ದಾನವಾಗಿ ಬರೆದು ಕೊಟ್ಟರು.

ಕಾರ್ಯಕ್ರಮವನ್ನು ಉದ್ಘಾಟಿಸಿದ ತಾಲ್ಲೂಕು ಸರ್ಕಾರಿ ನೌಕರರ ಸಂಘದ ಅಧ್ಯಕ್ಷ ಸಿ.ಆರ್. ನಾಗಭೂಷಣ್ ಮಾತನಾಡಿ ನಮ್ಮ ಮರಣಾನಂತರವೂ ನಮ್ಮ ಕಣ್ಣುಗಳನ್ನು ಜೀವಂತವಾಗಿಡುವ ಸದವಕಾಶವು ದೊರೆತಿರುವುದು ಮನುಕುಲದ ಅದೃಷ್ಟವೇ ಸರಿ ಎಂದು ನುಡಿದರು.

ಸಾರ್ವಜನಿಕ ಆಸ್ಪತ್ರೆಯ ನೇತ್ರ ತಜ್ಞರಾದ ಡಾ॥ ರಾಮ್ ಪ್ರಕಾಶ್ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು, ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಎಂ. ಮುನಿರೆಡ್ಡಿ, ತಾಲ್ಲೂಕು ವೈದ್ಯಾಧಿಕಾರಿ ಡಾ॥ ಜ್ಞಾನಪ್ರಕಾಶ್, ಅಕ್ಷರ ಜ್ಯೋತಿ ತಾಲ್ಲೂಕು ಸಂಯೋಜಕ ಶ್ರೀ ಕೆ. ಚಂದ್ರಶೇಖರ್, ನಾರಾಯಣ ನೇತ್ರಾಲಯದ ವ್ಯವಸ್ಥಾಪಕ ಶ್ರೀ ದಿನೇಶ್ ನಾಯಕ್ ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು.

## ಗುಲ್ಬರ್ಗಾ ಜಿಲ್ಲೆ



ದಿನಾಂಕ 05-09-2008 ರಂದು ಗುಲ್ಬರ್ಗ ಜಿಲ್ಲೆಯ, ಶ್ರೀ ವಿಠಲ ತಂದೆ ಶಂಕರ ವಗ್ಗನ ಸ್ಕೌಟ್ ಮಾಸ್ಟರ್ ರಾಜ್ಯಮಟ್ಟದ ಉತ್ತಮ ಶಿಕ್ಷಕ

ರೆಂದು ದಾವಣಗೆರೆಯಲ್ಲಿ ಸನ್ಮಾನಿಸಲಾಯಿತು. ಶ್ರೀ ವಗ್ಗನ ಅವರು ಕೇವಲ ಸ್ಕೌಟ್ ಮಾಸ್ಟರ್ ಮಾತ್ರವಲ್ಲ ಸಮಾಜಸೇವೆ, ನ್ಯಾಯಕ್ಕಾಗಿ ಹೋರಾಟ ಮಾಡುವುದು ಇವರ ಹುಟ್ಟುಗುಣವಾಗಿದೆ. ಇವರು ಜಿಲ್ಲೆಯ ಸ್ಕೌಟ್-ಗೈಡ್ ಅಭಿವೃದ್ಧಿ ಕಾರ್ಯದಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದ್ದಾರೆ. ಇವರಿಗೆ ಹೃತ್ಪೂರ್ವಕ ಅಭಿನಂದನೆಗಳು.

******************************

ದಿನಾಂಕ 20-09-2008 ರಂದು ಸರಕಾರಿ ಪದವಿ ಪೂರ್ವ ಮಹಾವಿದ್ಯಾಲಯ ಔರಾದ್‌ನಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ದೀಕ್ಷಾ ಸಮಾರಂಭ ಏರ್ಪಡಿಸಲಾಗಿತ್ತು. ಈ ಕಾರ್ಯಕ್ರಮದ ಮುಖ್ಯ ಅತಿಥಿಗಳಾಗಿ ಶ್ರೀಮತಿ. ಸಂಗೀತಾ ಕಟ್ಟಿಮನಿ, ಶ್ರೀಮತಿ ಇಂದಿರಾ-ಗುರುಮಠ ಶಾಲಾ ಸುಧಾರಣಾ ಸಮಿತಿಯ ಅಧ್ಯಕ್ಷರಾದ ಶ್ರೀ ಲಿಂಗರಾಜ ಪಾಟೀಲ. ಶ್ರೀಮತಿ ರೆಹಮುನ್ನಿಸಾ ಬೇಗ್ ಪ್ರಾಚಾರ್ಯರು ಸ.ಪ.ಪೂ. ಕಾಲೇಜು, ಆಗಮಿಸಿದ್ದರು. ಅನುರಾದ ಬಿ, ಇವರು ಅಧ್ಯಕ್ಷತೆಯನ್ನು ವಹಿಸಿದ್ದರು. ಶ್ರೀ ವಿಠಲ - ವಗ್ಗನ ರಾಜ್ಯ ಅತ್ಯುತ್ತಮ ಶಿಕ್ಷಕ ಎಂದು ಪ್ರಶಸ್ತಿ ಪಡೆದಿದ್ದು ಈ ಸಂದರ್ಭದಲ್ಲಿ ಸನ್ಮಾನಿಸಲಾಯಿತು.

## ಗದಗ ಜಿಲ್ಲೆ

ದಿನಾಂಕ 26-09-2008 ರಂದು ನರಗುಂದ ತಾಲ್ಲೂಕಿನ ಸ್ಕೌಟರ್ಸ್-ಗೈಡರ್ಸ್ ಸಮಾವೇಶವನ್ನು ಸಂಘಟಿಸಲಾಗಿತ್ತು. ಸಮಾರಂಭದ ಅಧ್ಯಕ್ಷತೆಯನ್ನು ತಾಲೂಕು ಸಂಸ್ಥೆಯ ಕಾರ್ಯಾಧ್ಯಕ್ಷ ರಾದ ಶ್ರೀಮತಿ ಸುಭದ್ರಮ್ಮ ಹುಜರತ್ತಿ, ವಹಿಸಿದ್ದರು. ಶ್ರೀ ಹೆಚ್. ಹೆಚ್. ಪೂಜಾರ ಶ್ರಿ ವಿ.ಎಸ್. ಥಾಣೆ, ಜಿಲ್ಲಾ ಸಹಾಯಕ ಸ್ಕೌಟ್ ಆಯುಕ್ತರಾದ ಶ್ರಿ ಜೆ.ಡಿ. ಪಾಟೀಲ ಹಾಗೂ ಜಿಲ್ಲಾ ಸಂಸ್ಥೆ ಕಾರ್ಯದರ್ಶಿಯಾದ ಶ್ರಿ ಬಿ.ಡಿ. ಕಿಲಬನವರ ವಹಿಸಿದ್ದರು.

ನರಗುಂದ ಪುರಸಭೆಯಿಂದ ಕೊಡಮಾಡಿದ 100 ಸ್ಕೌಟ್-ಗೈಡ್ ಸಮವಸ್ತ್ರಗಳನ್ನು ವಿತರಿಸಿದರು. ಕರ್ನಾಟಕ ರಾಜ್ಯದ ಮುಖ್ಯಮಂತ್ರಿಗಳ ಸಂಪುಟ ದರ್ಜೆಯ ಸಂಸದೀಯ ಕಾರ್ಯದರ್ಶಿಗಳಾದ ಹಾಗೂ ನರಗುಂದ ತಾಲೂಕಿನ ಶಾಸಕರೂ ಆದ ಶ್ರೀಮಾನ್ ಸಿ.ಸಿ. ಪಾಟೀಲರಿಗೆ ಕೃತಜ್ಞತೆ ಸಲ್ಲಿಸಲಾಯಿತು.

ತಾಲೂಕಾ ಸಂಸ್ಥೆಯಿಂದ ಸ್ಕೌಟ್ ಶತಮಾನೋತ್ಸವದ ಸವಿನೆನಪಿಗಾಗಿ ತಾಲೂಕಿನ ಎಲ್ಲಾ ಸ್ಕೌಟರ್ಸ್-ಗೈಡರ್ಸ್‌ಗಳಿಗೆ ಅದೇಶಗಳನ್ನು ಇಟ್ಟುಕೊಳ್ಳಲು ಒಂದೊಂದು ಫೈಲುಗಳನ್ನು ನೀಡಲಾಯಿತು.

ಸಮಾರಂಭದಲ್ಲಿ ಶ್ರೀ ವಿ.ಎಸ್. ಥಾಣೆ ನಿವೃತ್ತ ಗುರುಗಳು ಮಾತನಾಡುತ್ತಾ ಪುರಸಭೆಯಿಂದ ನೀಡಿದ ನಿವೇಶನದಲ್ಲಿ ಸ್ಕೌಟ್ ಭವನ ಕಟ್ಟಡದ ಅವಶ್ಯಕ. ಅದಕ್ಕಾಗಿ ಸಹಾಯ-ಸಹಕಾರ ನೀಡುವುದಾಗಿ ಹೇಳಿದರು. ಹಾಗೂ ತಾಲೂಕಿನ ಸಂಸ್ಥೆಯ ಕಾರ್ಯ ಚಟುವಟಿಕೆಗಳನ್ನು ಶ್ಲಾಘಿಸಿದರು.

ಶ್ರೀ ಜೆ.ಡಿ. ಪಾಟೀಲ ಜಿಲ್ಲಾಸಹಾಯಕ ಸ್ಕೌಟ್ ಆಯುಕ್ತರು ಮಾತನಾಡುತ್ತ ಇನ್ನೂ ಹೆಚ್ಚಿನ ಕಾರ್ಯಚಟುವಟಿಕೆಗಳು ತರಬೇತಿಗಳು ವರ್ಷದುದ್ದಕ್ಕೂ ನಡೆಯಲಿ ಅದಕ್ಕಾಗಿ ಅವಶ್ಯಕ ಸಹಾಯ-ಸಹಕಾರವನ್ನು ನೀಡುವುದಾಗಿ ಸಮಾರಂಭದಲ್ಲಿ ಭರವಸೆ ನೀಡಿದರು.

ಅಧ್ಯಕ್ಷತೆ ವಹಿಸಿ ಶ್ರೀ ಎಂ.ಆರ್. ಕಾಳೆಯವರು ಮಾತನಾಡುತ್ತಾ ನಾನು ಚಿಕ್ಕವನಿದ್ದಾಗ ಸ್ಕೌಟ್ ತರಬೇತಿ ವ್ಯವಸ್ಥೆ ಇರಲಿಲ್ಲ. ಆ ಸಮಯದಲ್ಲಿ ಇದ್ದಿದ್ದರೆ ನಾನು ಇನ್ನೂ ಸಾಕಷ್ಟು ಆನಂದಿಸುತ್ತಿದ್ದೆ. ಈ ಚಳವಳಿಯು ಮಾನವನ ಸರ್ವಾಂಗೀಣ ಬೆಳವಣಿಗೆಗೆ ಪೂರಕವಾಗಿದೆ ಎಂದು ಹೇಳಿದರು.

ಶ್ರೀ ಎಂ.ಕೆ. ಕುರಿಯವರ ಕಾರ್ಯಕ್ರಮವನ್ನು ನಿರೂಪಿಸಿದರು. ಶ್ರೀ ಬಿ.ಪಿ. ಶಿರಿಯಪ್ಪಗೌಡ್ರ ಶಿಕ್ಷಕರು ವಂದನಾರ್ಪಣೆಯನ್ನು ಮಾಡಿದರು.

****************************

ದಿನಾಂಕ 18-10-2008 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ತಾಲೂಕು ಸಂಸ್ಥೆ ಗದಗ, ಮೇಲಂತಸ್ತಿನ ಕಟ್ಟಡದ ಕಾಮಗಾರಿಯನ್ನು ವಿಧಾನ ಪರಿಷತ್ ಸದಸ್ಯರು ಹಾಗೂ ಮಾಜಿ ಶಿಕ್ಷಣ ಸಚಿವ ಶ್ರೀ ಬಸವರಾಜ ಹೊರಟ್ಟಿಯವರು. ಪರಿಶೀಲಿಸಿ ಸಂತಸ ವ್ಯಕ್ತಪಡಿಸಿದರು. ಸಂಸ್ಥೆಯ ಕಟ್ಟಡ ನಿರ್ಮಾಣಕ್ಕೆ ಈಗಾಗಲೆ ರೂ. 2.50 ಲಕ್ಷ ರೂ.ಗಳ ಅನುದಾನ ನೀಡಿದ್ದು, ಸ್ಕೌಟ್ ಕಾರ್ಯ ಚಟುವಟಿಕೆಗಾಗಿ ಒಳ್ಳೆಯ ಕಟ್ಟಡ ನಿರ್ಮಿಸುತ್ತಿರುವುದನ್ನು ಶ್ಲಾಘಿಸಿ ಇನ್ನೂ ರೂ. 2.50 ಲಕ್ಷ ರೂ.ಗಳ ಅನುದಾನವನ್ನು ಮಂಜೂರು ಮಾಡಿದರು.

ಕಾರ್ಯಕ್ರಮದಲ್ಲಿ ವೈದ್ಯನಾಥ ಆಯೋಗದ ಸದಸ್ಯರಾದ ಶ್ರೀ ಬಿ.ಬಿ. ಧಾರವಾಡ, ತಾಲ್ಲೂಕು ಸಂಸ್ಥೆಯ ಕಾರ್ಯಾಧ್ಯಕ್ಷರಾದ ಶ್ರೀ ಬಿ.ಎಸ್. ಬೆಂಜಲಿ, ಕೋಶಾಧ್ಯಕ್ಷರಾದ ಶ್ರೀ ಎಂ.ಎಸ್. ಹಿರೇಮಠ ಕಾರ್ಯದರ್ಶಿ ಶ್ರೀ ವ್ಹಿ.ಬಿ. ಪೋಲಿಸ ಪಾಟೀಲ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಎ.ಎಂ. ವಡಗೇರಿ ರಾಜ್ಯ ಪರಿಷತ್ ಸದಸ್ಯರು ಶ್ರೀ ಬಿ.ಎ. ವಸ್ತ್ರದ ಶ್ರೀ ಎಸ್.ಟಿ. ಬ್ಯಾಕೋಡ, ಶ್ರಿ ಎಂ.ಎನ್. ಕರೂರ ಶ್ರೀ ಮುಕ್ಕಣ್ಣವರ ಕಾರ್ಯಕಾರಿ ಸದಸ್ಯರೆಲ್ಲರೂ ಭಾಗವಹಿಸಿದ್ದರು.

## ತುಮಕೂರು ಜಿಲ್ಲೆ

ದಿನಾಂಕ 06-09-2008 ರಂದು ಭಾರತ್ ಸ್ಕೌಟ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ, ಕೊರಟಗೆರೆ ವತಿಯಿಂದ ಸಹಾಯಕ ಶಿಕ್ಷಣಾಧಿಕಾರಿಗಳಿಗೆ ಮತ್ತು ಸಂಪನ್ಮೂಲ ಅಧಿಕಾರಿಗಳಿಗೆ ಒಂದು ದಿನದ ಸಾಮಾನ್ಯ ಮಾಹಿತಿ ಶಿಬಿರವನ್ನು ಮತ್ತು ಸ್ಥಳೀಯ ಸಂಸ್ಥೆಯ ಕೌನ್ಸಿಲ್ ಸಭೆಯನ್ನು ಗುರುಭವನದಲ್ಲಿ ಏರ್ಪಡಿಸಲಾಗಿತ್ತು. ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಬಂಡಿವೀರಯ್ಯ, ಶಿಬಿರ ಉದ್ಘಾಟಿಸಿದರು. ರಾಜ್ಯ ಜಂಟಿ ಕಾರ್ಯದರ್ಶಿಗಳಾದ ಶ್ರೀ ಎನ್. ಶ್ರೀನಿವಾಸನ್ ರವರು ಸಂಪನ್ಮೂಲ ವ್ಯಕ್ತಿಯಾಗಿ ಆಗಮಿಸಿ ಮಹಿತಿ ನೀಡಿದರು. ಸ್ಥಳೀಯ ಅಧ್ಯಕ್ಷರಾದ ಶ್ರೀ ಅಹಮದ್ ಷರೀಫ್ ಸಭೆಯ ಅಧ್ಯಕ್ಷತೆ ವಹಿಸಿದ್ದರು. ತಾಲ್ಲೂಕಿನ ಎಲ್ಲಾ ಶಿಕ್ಷಣಾಧಿಕಾರಿಗಳು ಎಲ್.ಎ. ಪದಾಧಿಕಾರಿಗಳು ಭಾಗವಹಿಸಿದ್ದರು.

ದಿನಾಂಕ 8-9-08 ರಂದು ತುರುವೇಕೆರೆ ಸ್ಥಳೀಯ ಸಂಸ್ಥೆ ಕೌನ್ಸಿಲ್ ಸಭೆಯನ್ನು ಏರ್ಪಡಿಸಿದ್ದರು. ಸಂಸ್ಥೆ ಅಧ್ಯಕ್ಷರಾದ ಶ್ರೀಧನಪಾಲ್ ರವರು ಅಧ್ಯಕ್ಷತೆ ವಹಿಸಿದ್ದರು. ಶ್ರೀ ವೀರಕ್ಯಾತಪ್ಪ ಜಿಲ್ಲಾ ಸಂಸ್ಥೆ ಪ್ರತಿನಿಧಿಯಾಗಿ ಭಾಗವಹಿಸಿದ್ದರು. ಕಾರ್ಯದರ್ಶಿಗಳಾದ ಶ್ರೀಯೋಗಾನಂದ್, ಶ್ರಿ ಬಸವರಾಜು, ಶ್ರೀ ಹಾಲಾನಾಯಕ್ ಸಭೆ ವ್ಯವಸ್ಥೆಗೊಳಿಸಿದ್ದರು.

ದಿನಾಂಕ 9-9-08 ರಂದು ಚಿಕ್ಕನಾಯಕನಹಳ್ಳಿ ಇಲ್ಲಿ ಸಹಾಯಕ ಶಿಕ್ಷಣಾಧಿಕಾರಿಗಳಿಗೆ ಸಾಮಾನ್ಯ ಮಾಹಿತಿ ಶಿಬಿರ ಮತ್ತು ದಿನಾಂಕ 11-9-08 ರಂದು ತಾಲ್ಲುಕು ಕೌನ್ಸಿಲ್ ಸಭೆ ಮತ್ತು ಸ್ಕೌಟರ್, ಗೈಡರ್, ಸಮಾವೇಶವನ್ನು ಏರ್ಪಡಿಸಿದ್ದರು. ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಪ್ರಭುಸ್ವಾಮಿ ಸಮಾವೇಶವನ್ನು ಉದ್ಘಾಟಿಸಿದರು. ರಾಜ್ಯ ಸಂಘಟನಾ ಆಯುಕ್ತರಾದ ಶ್ರೀ ನಾರಾಯಣ ಶೆಟ್ಟಿ ಸಂಪನ್ಮೂಲ ವ್ಯಕ್ತಿಗಳಾಗಿ ಆಗಮಿಸಿ ಮಾಹಿತಿ ನೀಡಿದರು. ಸಮಾವೇಶಕ್ಕೆ ಸ್ಥಾನಿಕ ಆಯುಕ್ತರಾದ ಶ್ರೀ ಶಿವರುದ್ರಪ್ಪ, ಡಿ.ಓ.ಸಿ.ಗಳಾದ ಶ್ರೀ ವೀರಕ್ಯಾತಪ್ಪ ಭಾಗವಹಿಸಿದ್ದರು. ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಕ್ಷೇತ್ರ ಸಂಪನ್ಮೂಲ ಅಧಿಕಾರಿಗಳಾದ ಶ್ರಿ ಸಿದ್ಧರಾಜುರವರು ವಹಿಸಿದ್ದರು. ಕಾರ್ಯದರ್ಶಿಗಳಾದ ಶ್ರೀರಾಮಣ್ಣ ಸ್ವಾಗತಿಸಿದರು.

ದಿನಾಂಕ 17-9-08 ರಂದು ಉಚಿತ ಸಮವಸ್ತ್ರ

ಗಳ ವಿತರಣಾ ಸಮಾರಂಭವನ್ನು ಶ್ರೀ ಸಿದ್ಧಾರ್ಥ ಪ್ರೌಢಶಾಲೆ, ಸಿದ್ಧಾರ್ಥನಗರ ಇಲ್ಲಿ ಏರ್ಪಡಿಸಲಾಗಿತ್ತು. ಈ ಕಾರ್ಯಕ್ರಮಕ್ಕೆ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀಮತಿ ಆಶಾ ಪ್ರಸನ್ನಕುಮಾರ್, ಜಿಲ್ಲಾ ಆಯುಕ್ತರಾದ ಶ್ರೀ ಬಿ.ಆರ್. ವೇಣುಗೋಪಾಲ ಕೃಷ್ಣ ಮತ್ತು ಡಿ.ಓ.ಸಿ. ಶ್ರೀ ರಾಮಯ್ಯ ಭಾಗವಹಿಸಿದ್ದರು. ಸ್ಕೌಟ್ ಶಿಕ್ಷಕರಾದ ಶ್ರಿ ವರದರಾಜು ಕಾರ್ಯಕ್ರಮ ವ್ಯವಸ್ಥೆಗೊಳಿಸಿದ್ದರು.

## ಶಿವಮೊಗ್ಗ ಜಿಲ್ಲೆ



ದಿನಾಂಕ : 05-09-2008 ರಂದು ತೀರ್ಥಹಳ್ಳಿಯ ಸರ್ಕಾರಿ ಪದವಿ ಪೂರ್ವ ಕಾಲೇಜಿನಲ್ಲಿ ವೃತ್ತಿ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿರುವ ಮತ್ತು ಸ್ಕೌಟ್ ಶಿಕ್ಷಕರಾಗಿ ಕಳೆದ 11 ವರ್ಷಗಳಿಂದ ಕಾರ್ಯನಿರ್ವಹಿಸುತ್ತಿರುವ **ಶ್ರೀ ಎ.ಎಸ್. ಮಂಜುನಾಥ್** ಇವರಿಗೆ ಶಿವಮೊಗ್ಗ ಜಿಲ್ಲಾ ಮಟ್ಟದ **ಅತ್ಯುತ್ತಮ ಶಿಕ್ಷಕ ಪ್ರಶಸ್ತಿ**ಯನ್ನು ಸಾರ್ವಜನಿಕ ಶಿಕ್ಷಣ ಇಲಾಖೆಯು ನೀಡಿ ಗೌರವಿಸಿದೆ. ಶಿವಮೊಗ್ಗದ ಆದಿಚುಂಚನಗಿರಿ ಸಮುದಾಯ ಭವನದಲ್ಲಿ ನಡೆದ ಶಿಕ್ಷಕರ ದಿನಾಚರಣೆಯೆಂದು ಪ್ರಶಸ್ತಿ ಪ್ರದಾನ ಮಾಡಿ ಸನ್ಮಾನಿಸಲಾಯಿತು ಜಿಲ್ಲಾಧಿಕಾರಿ ಶ್ರೀ ಪಂಕಜ್ ಕುಮಾರ್ ಪಾಂಡೆ, ಮುಖ್ಯ ಕಾರ್ಯದರ್ಶಿ ಶ್ರೀ ಅನೂಜ್ ಕುಮಾರ್, MLC. ಶ್ರೀ ಮೀರ್ ಅಜೀಜ್ ಅಹಮದ್, ಶ್ರೀ ಪ್ರಸನ್ನನಾಥ ಸ್ವಾಮೀಜಿ, ಜಿಲ್ಲಾ ಪರಿಷತ್ ಸ್ಥಾಯಿ ಸಮಿತಿ ಅಧ್ಯಕ್ಷರಾದ ಶ್ರೀ ಬಸವರಾಜಪ್ಪ, DDPI ಶ್ರೀ ಎಸ್.ಎಲ್. ಚವ್ಹಾಣ್ ಇವರುಗಳ ಉಪಸ್ಥಿತಿಯಲ್ಲಿ ಕಾರ್ಯಕ್ರಮ ನೆರವೇರಿತು.

## ಬೆಳಗಾಂ ಜಿಲ್ಲೆ

ದಿನಾಂಕ 04-10-2008 ರಂದು ಬೈಲ ಹೊಂಗಲ ತಾಲ್ಲೂಕು ಮಟ್ಟದ ಸ್ಕೌಟರ್ಸ್ ಮತ್ತು ಗೈಡರ್ಸ್ ಸಮಾವೇಶವು ಎಂ.ಎಸ್.ಎಸ್.ಆರ್. ಪ್ರೌಢಶಾಲೆ ಸಭಾಭವನ ಬೈಲ ಹೊಂಗಲದಲ್ಲಿ ಶ್ರಿ ವಣ್ಣೂರ್ ಕ್ಷೇತ್ರ ಶಿಕ್ಷಣಾಧಿಕಾರಿಗಳು ಬೈಲಹೊಂಗಲ ಇವರ ಅಧ್ಯಕ್ಷತೆಯಲ್ಲಿ ಜರುಗಿತು. 125 ಸ್ಕೌಟರ್ಸ್-ಗೈಡರ್ಸ್ ಮತ್ತು ಶಿಕ್ಷಕರು ಭಾಗವಹಿಸಿದ್ದರು.

****************************

Renuka Sugar's Foundation Primary School, Athani recently celebrated the International Non-Violence Day on the occasion of Mahatma Gandhi Jayanthi. The function was inaugurated by S.G. Badiger, Head Master, Higher Primary School, Belwad of Athani Taluk. In the afternoon on the same day, the school also celebrated the Inauguration of "Cub and Bulbul" Unit. The Chief Counsellor of Shree Renuka Sugars' Foundation and Assistant State Commissioner for (Guides) Dr. Purnima Pattanshetti inaugurated the Units. On this occasion a Tree Planting ceremony was carried out by Mr. Hootti, Principal and Secretary of Scouts and

Guides Association, Athani Taluk, Sri Mooni Jacob and Sri Ram Mohan Rao, General Managers of Shree Renuka Sugars Limited Unit IV were the Guests of Honour.

## Bangalore North District

A New Scout Unit was inaugurated on 28th Sept. 2008 at St. Anthony's Boys School, Shivajinagar by Rev. Fr. John Solaman. Sri. T.S. Lucas, State Commissioner (S) was the Chief Guest, Mr. Umashankar, Scout Master was present on this occasion.

**Basic Course for Flock Leaders and Guide Captains.**

Basic course for Flock Leaders and Guide Captains was organised at St. Anthony's Boys School, Shivajinagar from 11-10-2008 to 17-10-2008 The course was Inaugurated by Rev. Fr. John Solaman, Mrs. B. Revathy. L.T. (B) was the Leaders of the Flock Leaders Course Mrs. Susheela Gopal A.L.T. (G) was the Leaders of Guide Captains Course. There were 12 candidates & 11 candidates respectively for Flock Leaders and Guide Captains Course.

Miss Ravi Wesley, State Commissioner (G) was the Chief Guest at the Validictory Function

## Annual Camp Report

The Annual Camp-2008 of HAL Rover Crew was held at Maharashtra State from 15th to 27th Sept. 2008, was participated by 22 Rover Scouts of H.A.L. Rover Crew under the Leadership of Sri P. Nanda Kumar.

The Rovers had National Integration Programme with the Scouts and Guides of Maharashtra State apart from their regular Training Sessions.

As part of the activities the Rovers visited ' SILVASA' Capital of Dadar & Nagar Haveli. The Rovers also visited Daman, the Union Territory of India.

The Rovers were invited for Tea by the State Chief Commissioner, Mr. B.I. Nagarale, I.A.S. (Retd.) at the State Head Quarters, Maharastra State, Bharat Scouts & Guides at Shivaji park, Mumbai and all of them participated.

# Celebration of Flag Day-Foundation Day - 7th Nov. 2008

As in previous years, 7th November 2008 will be celebrated as Flag Day. Flag Day Stickers have been prepared like last years we have to approach as many members of the organization and the community as possible on this 7th November. The aim of the celebration is not only to reach the community with a view to popularize the movement but also to raise some funds for the Bharat Scouts & Guides at Unit/LA/DA/ State and National levels. Other modalities to celebrate the Day are given below to facilitate action at your end.

1. 50% of the collections are to remain with the district and the rest is to be sent to State Headquarters.
2. A sum of Rs. 2/- only is to be collected for each sticker. If some VIP wants to contribute more, not more than Rs. 10/- (ten only) per sticker is to be collected in any case.
3. Meetings at different levels with Scout/ Guide leaders may be arranged at the earliest to prepare the strategy for 100% distribution of Flag Day Stickers.
4. All District Chief Commissioners and District Commissioners (S/G) are requested to depute a contact person for monitoring the stickers distribution and collection of the amount.
5. A delegation of top leaders may be arranged to visit Deputy commissioner and other dignitaries to present stickers. It is likely to lead to improve our image and visibility.
6. All the sections of Scout and Guide Wings and Adult leaders may be involved in the celebration.
7. Account with full amount (50% of collection) so collected, may be sent to the State Headquarters by Bank Draft within a period of one month after the flag day.

***Sd/- State Secretary***

**Please Celebrate 7th November Each Year as**

## Flag Day - Foundation Day

**Please sell Stickers to well wishers Sympathisers of the Movement. Increase the Scout/Guide Tribe All over the State to uphold Peace - Service, Intergrety-Character Integration**

***Sd/- STATE SECRETARY***



(ಈ ಸಂಜೆ, 2 ಅಕ್ಟೋಬರ್ 2008)

ರಾಜ್ಯ ಮುಖ್ಯ ಆಯುಕ್ತ ಶ್ರೀ ಕೊಂಡಜ್ಜಿ ಷಣ್ಮುಖಪ್ಪ, ರಾಜ್ಯ ಕೋಶಾಧಿಕಾರಿ ಶ್ರೀ ಟಿ. ಪ್ರಭಾಕರ್, ಲೆಪ್ರಸಿ ಮಿಷನ್ ಅಧ್ಯಕ್ಷ ಡಾ.ಡಿ.ಪಿ.ಎನ್. ಪ್ರಸಾದ್, ನಿರ್ದೇಶಕ ಡಾ. ಜಯಕುಮಾರ್ ಡೇನಿಯಲ್, ಯುವಜನ ಸೇವಾ ಇಲಾಖೆ ಜಂಟಿ ನಿರ್ದೇಶಕ ಶ್ರೀ ಆರ್.ಎಲ್. ಪಾಟೀಲ್ ಹಾಗು ಜಿಲ್ಲಾ ಮತ್ತು ರಾಜ್ಯ ಸಂಸ್ಥೆ ಪದಾಧಿಕಾರಿಗಳು ಪಥಚಲನದಲ್ಲಿ ಭಾಗವಹಿಸಿದರು.



THE NEW INDIAN EXPRESS
FRIDAY, OCTOBER 3 | 2008 | BANGALORE

THE HINDU • FRIDAY, OCTOBER 3, 2008 BANGALORE

# Following the Mahatma's ideals

Correspondent

BANGALORE: Jyoti Ranjan Mahakul, a student of SDMT Prabhavati Public School in Titlagarh, Orissa, won the first prize in the "I revived the Mahatma, 2008", a competition held to mark the birth anniversary of Mahatma Gandhi here on Thursday. Speaking to *The Hindu* at the event held at Bishop Cotton Girls' High School auditorium, Jyoti said: "I was not nervous when I delivered the dialogue, but I was not sure of winning the first prize. It is a great feeling and I will cherish this moment."

The participants were required to dress the way Gandhiji did. They also spoke on leprosy and the ways to eradicate the disease.

"I am greatly moved by Gandhiji's ideals. His call for non-violence and truth are relevant even today," Jyoti said.

"We need to understand the beauty of his teachings." B. Ramaprasad, a student of Sacred Heart Convent Anglo-Indian Higher Secondary School, Villupuram, won the second prize, while Manik Saraswat of Jammu and Kashmir won the third prize.

The programme was jointly organised by The Leprosy Mission (TLM) and the Bharath Scouts and Guides in association with Bishop Cotton Girls' High School. The former Minister and vice-president of Bharath Scouts and Guides, Karnataka, P.G.R. Sindhia was the chief guest.

H.T. Sangliana, MP, said that leprosy had been a major health problem. Mahatma Gandhi, Mother Teresa and Jesus Christ had worked towards alleviating the sufferings of lepers, he said. "For centuries, lepers have been considered unwanted and were driven out of human habitat. We need to have an integrated approach to eradicate leprosy," he said.

Princess Franklyn, principal of Bishop Cotton Girls' High School, said the Karnataka chapter of The Leprosy Mission had been launched recently and it aimed at creating awareness among students about leprosy.

# ಗಾಂಧಿ ಜಯಂತಿ ಅಂಗವಾಗಿ ಕುಷ್ಠರೋಗದ ಬಗ್ಗೆ ಜಾಗೃತಿಯ ವಿಹಂಗಮ ನೋಟ



**ಗಾಂಧಿ ಜಯಂತಿ ಅಂಗವಾಗಿ ಕುಷ್ಠ ರೋಗದ ಬಗ್ಗೆ ಜಾಗೃತಿ ಮೂಡಿಸಲು ಸ್ಕೌಟ್ಸ್ ವಿದ್ಯಾರ್ಥಿಗಳು ಗಾಂಧಿ ವೇಷಧರಿಸಿ ವಿಧಾನಸೌಧದ ಮುಂಭಾಗ ಜಾಥಾ ನಡೆಸಿದರು. ಸಚಿವ ಬಿ.ಎನ್. ಬಚ್ಚೇಗೌಡ ಪಾಲ್ಗೊಂಡಿದ್ದರು.**

**ವಿಜಯ ಕರ್ನಾಟಕ ಕೃಪೆ, 3 ಅಕ್ಟೋಬರ್ 2008**



ವಿಧಾನಸೌಧದ ಮುಂಭಾಗದಲ್ಲಿಂದು ನಡೆದ ಕುಷ್ಠ ರೋಗದ ಬಗ್ಗೆ ಅರಿವು ಮೂಡಿಸುವ ಜಾಗೃತಿ ಜಾಥಾದಲ್ಲಿ ಸ್ಕೌಟ್ ಹಾಗು ಗೈಡ್ ವಿದ್ಯಾರ್ಥಿಗಳು

**2 ಅಕ್ಟೋಬರ್, ಸಂಜೆ ವಾಣಿ ಕೃಪೆ**



ಮಹಾತ್ಮಗಾಂಧಿ ಜಯಂತಿ ಹಾಗೂ ಲಾಲ್‌ಬಹದ್ದೂರ್ ಶಾಸ್ತ್ರೀ ಜಯಂತಿಯ ಆಚರಣೆ ಅಂಗವಾಗಿ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಹಾಗೂ ಜಿಲ್ಲಾ ಉಪ-ಕಾರಾಗೃಹದ ಸಹಯೋಗದೊಂದಿಗೆ ಹಾಸನ ನಗರದ ಜೈಲು ಆವರಣದಲ್ಲಿ "ಸರ್ವಧರ್ಮ ಪ್ರಾರ್ಥನೆ"ಯ ಅಧ್ಯಕ್ಷತೆಯನ್ನು ಜಿಲ್ಲಾ ಮುಖ್ಯ ಆಯುಕ್ತ ಡಾ॥ ವೈ.ಎಸ್. ವೀರಭದ್ರಪ್ಪ ವಹಿಸಿದರು. ಸ್ಕೌಟ್ಸ್/ಗೈಡ್ಸ್‌ಗಳು ಮತ್ತು ಜಿಲ್ಲಾ ಪದಾಧಿಕಾರಿಗಳು ಭಾಗವಹಿಸಿದರು.



ಮಂಡ್ಯ ಜಿಲ್ಲಾ ಮಟ್ಟದ ಸ್ಕೌಟ್ಸ್/ಗೈಡ್ಸ್ ರ್‍ಯಾಲಿಯ ಉದ್ಘಾಟನೆಯನ್ನು ಮಂಡ್ಯ ಜಿಲ್ಲಾ ಪಂಚಾಯತ್ ಅಧ್ಯಕ್ಷರಾದ ಶ್ರೀ ವೆಂಕಟೇಶ್ ಉದ್ಘಾಟಿಸಿದರು. ಶ್ರೀ ಕೆ. ನರಸಿಂಹ ಮೂರ್ತಿ, ಜಿಲ್ಲಾ ಮುಖ್ಯ ಆಯುಕ್ತ, ಶ್ರೀಮತಿ ಮೀರಾ ಶಿವಲಿಂಗಯ್ಯ, ಜಿಲ್ಲಾ ಗೈಡ್ಸ್ ಆಯುಕ್ತೆ, ಶ್ರೀ ಭಕ್ತವತ್ಸಲ, ಜಿಲ್ಲಾ ಸ್ಕೌಟ್ಸ್ ಆಯುಕ್ತ ಹಾಗೂ ಜಿಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು.



ದಿನಾಂಕ 2-10-2008ರಂದು ಗಾಂಧಿಜಯಂತಿ ಪ್ರಯುಕ್ತ ದಾವಣಗೆರೆಯ ಶ್ರೀ ಜಗದ್ಗುರು ಮೃತ್ಯುಂಜಯ ಸ್ವಾಮಿಗಳ ಸಾನಿಧ್ಯದಲ್ಲಿ ಸ್ಕೌಟ್ಸ್/ಗೈಡ್ಸ್ ಮತ್ತು ಸ್ಕೌಟರ್ಸ್/ಗೈಡರ್ಸ್‌ಗಳು ಸರ್ವಧರ್ಮ ಪ್ರಾಥನೆಯಲ್ಲಿ ಪಾಲ್ಗೊಂಡಿರುವುದು.



ರಾಷ್ಟ್ರೀಯಮಟ್ಟದ ಚಿತ್ರ ಸ್ಪರ್ದೆಯಲ್ಲಿ ಪ್ರಥಮ/ ದ್ವಿತಿಯ/ ತೃತೀಯ ಸ್ಥಾನ ಪಡೆದ ಜಿಲ್ಲೆಯ ವಿಜೇತರನ್ನು **ರೆವರೆಂಡ್ ಫಾದರ್ ಫ್ರಾನ್ಸಿಸ್ ಸೆರಾವೊ** ಅವರು ಜಿಲ್ಲಾಮಟ್ಟದ ಸ್ಕೌಟರ್ / ಗೈಡರ್ ಸಮವೇಶದಂದು ಸನ್ಮಾನಿಸಿದರು. ಶ್ರೀ ಐ.ಎ. ಕೈರನ್ನ, ಜಿಲ್ಲಾ ಮುಖ್ಯ ಆಯುಕ್ತ ಹಾಗೂ ಜಿಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು.



ದಿನಾಂಕ 9/9/2008ರಂದು ತುಮಕೂರು ಜಿಲ್ಲೆ ಚಿಕ್ಕನಾಯಕನಹಳ್ಳಿಯಲ್ಲಿ ನಡೆದ ಸಹಾಯಕ ಶಿಕ್ಷಣಾಧಿಕಾರಿಗಳಿಗೆ ಸಾಮಾನ್ಯ ಮಾಹಿತಿ ಶಿಬಿರವನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಪ್ರಭುಸ್ವಾಮಿ ಉದ್ಘಾಟಿಸಿದರು, ಶ್ರೀ ನಾರಾಯಣಶೆಟ್ಟಿ, SOC(S) ಸಂಪನ್ಮೂಲ ವ್ಯಕ್ತಿಗಳಾಗಿದ್ದರು.



2008 ಅಕ್ಟೋಬರ್, 4ರಿಂದ 6ರವರಿಗೆ ಉತ್ತರ ಕನ್ನಡ ಜಿಲ್ಲೆಯಲ್ಲಿ ನಡೆದ ಪೆಟ್ರೋಲ್ ಲೀಡರ್ ಕ್ಯಾಂಪ್‌ನಲ್ಲಿ ಶ್ರೀ ವಿ.ಜಿ. ನಾಯಕ್ ಅವರು ಸ್ಕೌಟ್ ಮಕ್ಕಳಿಗೆ ಬಿ.ಪಿ.ಸಿಕ್ಸ್ ಬಗ್ಗೆ ತರಬೇತಿ ನೀಡುತ್ತಿರುವುದು.

ಕ್ಯಾಂಪೂರಿಯ ಕಾರ್ಯಕ್ರಮದಲ್ಲಿ ಪಾಲ್ಗೊಂಡಿರುವ ಉತ್ತರ ಕನ್ನಡ ಜಿಲ್ಲೆಯ ಸ್ಕೌಟ್ಸ್‌ಗಳು →





← ಪಿರಾಮಿಡ್ ಪ್ರದರ್ಶನ ನೀಡುತ್ತಿರುವ ಉತ್ತರ ಕನ್ನಡ ಜಿಲ್ಲೆಯ ಸ್ಕೌಟ್ಸ್‌ಗಳು.

ಮಂಡ್ಯ ಜಿಲ್ಲಾಮಟ್ಟದ ರ್‍ಯಾಲಿಯಲ್ಲಿ ಭಾಗವಹಿಸಿದ → ಸ್ಕೌಟ್ಸ್/ಗೈಡ್ಸ್‌ಗಳು.





ಗಾಂಧಿ ಜಯಂತಿ ದಿನದಂದು **ಪರಿಸರ ಸಂರಕ್ಷಣೆ** ← ಕಾರ್ಯಕ್ರಮದಲ್ಲಿ ಪಾಲ್ಗೊಂಡ ಬೆಳಗಾವಿ ಜಿಲ್ಲೆಯ ಕಬ್ಸ್/ಬುಲ್‌ಬುಲ್ಸ್‌ಗಳು

**ಸಸಿ ನೆಡುವ** ಕಾರ್ಯಕ್ರಮದಲ್ಲಿ ಪಾಲ್ಗೊಂಡಿರುವ ದಕ್ಷಿಣ ಕನ್ನಡ ಜಿಲ್ಲೆಯ → ಕಬ್ಸ್/ಬುಲ್-ಬುಲ್ಸ್ ಮತ್ತು ಸ್ಕೌಟ್ಸ್/ಗೈಡ್ಸ್‌ಗಳು.



Regd as News Paper (Magazine) No : **CPMG/KA/BGW-549/2006-08**
Permitted to Post under WPP System
Vide No.: WPP-87 of SSP, BANGALORE WEST
Posted at: Bangalore City H.P.O. on 30-10-2008




**If not delivered please return to :**
**EDITOR, Karnataka Scout & Guide**
State Headquarters, Prof. P. Sivashankar Circle
Kondajji Basappa Road, Fort Bangalore - 02. Ph: 26701227

**Published for** : The Bharat Scouts & Guides, Karnataka, State Headquarters, Fort, Bangalore - 560 002
by the State Secretary and Printed at : Sathyasri Printers (Pvt) Ltd., 5th Main, Chamarajpet, Bangalore - 560 018.




ದಿನಾಂಕ ಅಕ್ಟೋಬರ್ 2, 2008ರಂದು ಗಾಂಧಿ ಜಯಂತಿ ಅಂಗವಾಗಿ ವಿಧಾನಸೌದದ ಮುಂಭಾಗದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಕುಷ್ಠರೋಗದ ಬಗ್ಗೆ ಭಿತ್ತಿ ಪತ್ರಗಳನ್ನು ಹಿಡಿದು ಪಥಚಲನದಲ್ಲಿ ಭಾಗವಹಿಸಿರುವುದು.